ಮೊದಲಚ್ಚು
ಡಿಸೆಂಬರ್ ೧೯೫೨

# ನೆನಕೆ

ನಮ್ಮ ಪ್ರಕಾಶನದಲ್ಲಿ ಕೆಲವೊಂದು ಕೃತಿಗಳನ್ನಿತ್ತ ಶ್ರೀ. ವರದರಾಜ ಹುಯಿಲಗೋಳರು ಕನ್ನಡ ಜನಕ್ಕೆ ಸುಪರಿಚಿತರಾಗಿದ್ದಾರೆ. ಅವರೀಗ ತಮ್ಮ ಹಳಗನ್ನಡ ಸಾಹಿತ್ಯಾಭ್ಯಾಸದಲ್ಲಿ ಸ್ಫುರಿಸಿದ ಐದು ಪ್ರತಿಭಾಂಕುರಗಳನ್ನೂ ನಮ್ಮಿಂದಲೇ ಕೊಡಿಸುತ್ತಿದ್ದಾರೆ. ಅವರ ಸುಹೃದಯತೆ—

ಸಾಹಿತ್ಯಾಭ್ಯಾಸ – ವಿಮರ್ಶೆಗಳೇ ಜೀವನವಾಗಿದ್ದ, 'ಕನ್ನಡಸಂಶೋಧನ' ದಲ್ಲಿ ಮುಳುಗೆದ್ದ ಪ್ರಾಧ್ಯಾಪಕ ಸ. ಸ. ಮಾಳವಾಡ ಅವರು ಸಮುಚಿತವಾದ ಮುನ್ನುಡಿಯಿಂದ ಇದನ್ನು ವಿಭೂಷಿಸಿದ್ದಾರೆ. ಅವರ ಸಸ್ನೇಹ ಉಪಕೃತಿ—

ಸದಾ ಸ್ಮರಣೀಯ.

—ಪ್ರಕಾಶಕ

ಪ್ರಕಾಶಕರು—ಮುದ್ರಕರು :
ಬಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ
ಪ್ರತಿಭಾ ಮುದ್ರಣ
ಧಾರವಾಡ

ಬೆಲೆ : ರೂ. ೧.೦೦

# ಅರ್ಪಣೆ

ವಿಧವಿಧವಾಗಿ ಚೇತನಕೊಟ್ಟು
ಜೀವನದಲ್ಲಿ ಬಹು ದಿನಗಳಿಂದ ನೆರಳು ನೀಡುತ್ತಿರುವ
ಕವಿವರ್ಯ **ದ. ರಾ. ಬೇಂದ್ರೆ**ಯವರಿಗೆ

# ಮೊದಲ ಮಾತು

'ಫಲಸಂಚಯ'ದಿಂದ ಆರಂಭವಾದ ಶ್ರೀ ವರದರಾಜ ಹುಯಿಲಗೋಳರ ಸಾಹಿತ್ಯಸೃಷ್ಟಿ ಚೆಲ್ಲವರಿದಿದೆ, ಸಣ್ಣ ಕತೆ, ಕಾದಂಬರಿ, ಬಾಲಸಾಹಿತ್ಯ, ವಿಮರ್ಶೆ, ನಾಟಕಗಳ ರೂಪದಲ್ಲಿ. ಸಾಹಿತ್ಯ ಸಂಸ್ಕಾರದ ಮನೆತನದಲ್ಲಿ ಬೆಳೆದು, ವರುಣ ಕುಂಜದ ಗರಡಿಯಲ್ಲಿ ಸಿದ್ಧರಾಗಿ, ಸಾಹಿತ್ಯಬಾಂಧವ್ಯದಲ್ಲಿ ಒಡನಾಟವಾಡುವ ಇವರು ಈಗಾಗಲೇ ತರುಣ ಬರೆಹಗಾರರಲ್ಲಿ ಒಳ್ಳೆಯ ಹೆಸರನ್ನೂ ಗಳಿಸಿದ್ದಾರೆ. ಹೀಗಿದ್ದೂ '**ಅಮೃತಮತಿ**' ಎಂಬ ತಮ್ಮೀಕೃತಿಗೆ ನನ್ನಿಂದ ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ.

ಮುನ್ನುಡಿಯನ್ನು ಒಮ್ಮೆ ಶಬರಿಯ ಕಾರ್ಯಕ್ಕೆ ಹೋಲಿಸಿದ್ದರು, ಪ್ರಿನ್ಸಿಪಾಲ ಗೋಕಾಕರು. ಶಬರಿಯಂತಹ ನಿಷ್ಠೆ ಅದೆಷ್ಟು ಮುನ್ನುಡಿಕಾರರಿಗೆ ಸಾಧ್ಯ ? ನನ್ನಂತಹರಿಗೆ ಅಂತಹ ನಿಷ್ಠೆ ಸಾಧ್ಯವಲ್ಲವೆಂದೂ ಅನಿಸುತ್ತಿದೆ. ಶ್ರೀ ವರದರಾಜರ ಇನ್ನೊಂದು ಕೃತಿಗೆ ಮುನ್ನುಡಿಯ ಕಲಶವನ್ನಿತ್ತಿದ ಹಿರಿಯರಾದ ಶ್ರೀ. ಬೆಟಗೇರಿ ಕೃಷ್ಣಶರ್ಮರು ಮುನ್ನುಡಿಗಳ ಬಗೆಗೆ ಟೀಕೆಯ ಭಯವನ್ನೂ ಸೂಚಿಸಿದರು. ಈ ಬಗೆಯ ಭಯವನ್ನೂ ನಾನು ತೋರಬೇಕಾಗಿಲ್ಲವೆಂದು ಭಾವಿಸುತ್ತೇನೆ.

ಶ್ರೀ ವರದರಾಜರು ಕನ್ನಡ ಸಾಹಿತ್ಯದ ನಿಷ್ಠಾವಂತ ವಿದ್ಯಾರ್ಥಿಗಳು. ವೃತ್ತಿಯಿಂದ ಅಧ್ಯಾಪಕರು. ಅವರ ಸ್ವಭಾವದಲ್ಲಿಯೇ ಸಾಹಿತ್ಯದ ಸವಿಯು ಅಳವಟ್ಟಿದೆ. ತೆರೆದ ಕಣ್ಣು ಹೃದಯಗಳಿಂದ ಅವರು ಜೀವನವನ್ನು ನಿರುಕಿಸಬಲ್ಲವರಾಗಿದ್ದಾರೆ. ಅಂತಹರಿಗೆ ನಮ್ಮ ಸುತ್ತಣ ಜೀವನದಲ್ಲಿ, ಕಾವ್ಯಪ್ರಪಂಚದಲ್ಲಿ ರಮ್ಯವಾಗಿ ನಿರೂಪಿಸಲು ಅರ್ಹವಾದ ಅನುಭವ ವಿಶೇಷಗಳು, ಸನ್ನಿವೇಶಗಳು ಒದಗುವುದು ಸಹಜವೇ ಆಗಿದೆ. ಈ ಹಿನ್ನೆಲೆಯಲ್ಲಿ ನಾನು ವರದರಾಜರ ಕೃತಿಗಳ ಬಗೆಗೆ ಆಸ್ಥೆ ವಹಿಸಿದ್ದೇನೆ. ಅಂತೆಯೇ ಈ ಕೃತಿಗೆ ಕೆಲವು 'ಮೊದಲ ಮಾತು'ಗಳನ್ನು ಬರೆಯುತ್ತಿದ್ದೇನೆ.

( ೨ )

ಪ್ರಾಚೀನ ಕನ್ನಡಸಾಹಿತ್ಯಕ್ಕೆ ಸಂಬಂಧಪಟ್ಟ ದಂತಕಥೆಯೊಂದರ ಆಧಾರದ ಮೇಲೆ ಕಲ್ಪನೆಯ ಹಂದರವನ್ನು ಕಟ್ಟಿ ವರದರಾಜರು 'ಫಲಸಂಚಯ' ಕತೆಯನ್ನು ರಚಿಸಿದರು. ಈಗ ಅದೇ ಬಗೆಯ ಹಾದಿಯಲ್ಲಿ ಮುಂದುವರಿದು **'ಅಮೃತಮತಿ'** ಎಂಬ ರೂಪಕಗಳ ಸಂಕಲನವನ್ನು ಒದಗಿಸಿದ್ದಾರೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಸ್ಫುಟವಾಗಿರುವ ಸನ್ನಿವೇಶಗಳನ್ನೇ ಇಲ್ಲಿ ಬಳಸಿಕೊಳ್ಳಲಾಗಿದೆ. ನಮ್ಮ ಕಾವ್ಯಗಳಲ್ಲಿಯ ಪ್ರಣಯಕಥೆಗಳು, ಆ ಕವಿಗಳ ನಾಟಕ ಗುಣವಿಶೇಷದ ದೃಷ್ಟಿ ಇವುಗಳನ್ನು ಎತ್ತಿ ತೋರಿಸುವುದು ಇಲ್ಲಿಯ ಗುರಿಯೆನ್ನಬಹುದು. 'ನವ್ಯಕಾವ್ಯ'ದ ಈ ಕಾಲದಲ್ಲಿ ಈ ತರುಣ ಲೇಖಕರು ತಮ್ಮ ಕೃತಿಗೆ ಹಳಗನ್ನಡ ಕಾವ್ಯಗಳಿಂದ ವಸ್ತುವನ್ನು ಆರಿಸಿಕೊಂಡಿರುವುದರಲ್ಲಿ ಒಂದು 'ನವೀನತೆ'ಯಿದೆಯೆನ್ನಬೇಕು. ಹಳಗನ್ನಡ ಕಾವ್ಯಗಳ ಪರಿಚಯ ಪ್ರಚಾರಗಳ ದೃಷ್ಟಿಯನ್ನಿಟ್ಟುಕೊಂಡು ಈಗಾಗಲೇ ಶ್ರೀ ಜಿ. ಪಿ. ರಾಜರತ್ನಂ, ಶ್ರೀ. ಎಲ್. ಗುಂಡಪ್ಪ ಇವರು ಕೆಲವೊಂದು ಕೃತಿಗಳನ್ನು ಒದಗಿಸಿದ್ದಾರೆ. ಅಂತಹ ಕಾರ್ಯವನ್ನು ಇನ್ನೊಂದು ಬಗೆಯಿಂದ ಮುಂದುವರಿಸಲು ಶ್ರೀ. ವರದರಾಜರು ಮುಂದೆ ಬಂದಿದ್ದಾರೆ. ಇದು ಉಪಯುಕ್ತವೂ ಅಹುದು. ನವ್ಯವಾಗಬೇಕೆನ್ನುವ ಉತ್ಸಾಹದಲ್ಲಿ ಹಳೆಯದನ್ನು ಕಡೆಗಣಿಸುವ ದೃಷ್ಟಿ ಒಡಮೂಡುತ್ತಿದೆ. ಆದರೆ ಪ್ರಾಚೀನ ಕಾವ್ಯಭಾಂಡಾರದ ಸಂಪತ್ತನ್ನೇ ನಾವು ಎರವಲಾಗಿ ಪಡೆಯುವುದರ ಪ್ರಯೋಜನವನ್ನು ಶ್ರೀ ವರದರಾಜರ ಈ ಕೃತಿ ಬಿಂಬಿಸುವಂತಿದೆ. ಆ ಪ್ರಾಚೀನ ಕನ್ನಡ ಕಾವ್ಯಭಾಂಡಾರದ ಭಾವ, ರಸ, ಅರ್ಥ, ಸಂದೇಶ ಇವುಗಳಿಗೆ ಎರವಾದರೆ ನಾವು ಬಡವರೂ ಆಗಬಹುದೆಂಬುದನ್ನು ಈ ಕೃತಿ ಸೂಚಿಸುವಂತಿದೆ.

( ೩ )

'ಯಶೋಧರ ಚರಿತೆ', ಕುಮಾರರಾಮನ ಬಗೆಗೆ ಕಾವ್ಯಗಳು, ಕಂತಿಹಂಪರ ಸಮಸ್ಯೆಗಳು–ದಂತಕಥೆಗಳು, 'ಹರಿಬದೆಯ ಧರ್ಮ' 'ಪ್ರಭುಲಿಂಗಲೀಲೆ'— ಈ ಪ್ರಸಿದ್ಧ ಕನ್ನಡ ಕೃತಿಗಳಿಂದ ಈ ಸಂಕಲನದ ಐದು ರೂಪಕಗಳನ್ನು ಆಳ

ವಡಿಸಿಕೊಳ್ಳಲಾಗಿದೆ. ಪ್ರಾಚೀನ ಕನ್ನಡ ಕಾವ್ಯಗಳ ರಸವತ್ತಾದ ಭಾಗಗಳನ್ನು ನಾಟಕಗುಣ–ಪ್ರಭಾವವುಳ್ಳ ಸನ್ನಿವೇಶಗಳನ್ನು ಆಯ್ದುಕೊಳ್ಳುವಲ್ಲಿ, ಅದನ್ನು ನಿರೂಪಿಸುವಲ್ಲಿ ಶ್ರೀ ವರದರಾಜರು ಜಾಣ್ಮೆಯನ್ನು ತೋರಿದ್ದಾರೆ. ಈ ಮೂಲಕ ಪ್ರಾಚೀನ ಕನ್ನಡ ಕಾವ್ಯಗಳಲ್ಲಿಯ ಸುಂದರ ತಾಣಗಳ ಪರಿಚಯದ ಉದ್ದೇಶವೂ ಇಲ್ಲಿ ಸಾಧಿಸಿದೆ.

ಮನಸಿಜನ ಮಾಯೆ, ವಿಧಿವಿಳಸನ ಇವುಗಳಿಗೆ ವಶರಾದ ಮೂವರು, ಕವಿಕಾವ್ಯಜೀವನದಲ್ಲಿ ವಿಹರಿಸಿದ ಇಬ್ಬರು ಹೀಗೆ ಎರಡು ಗುಂಪುಗಳಲ್ಲಿ ಐವರು ಮಹಿಳೆಯರು ಇಲ್ಲಿಯ ನಾಯಿಕೆಯರಾಗಿದ್ದಾರೆ. ಎರಡು ಬಾನುಲಿಯ ರೂಪಕಗಳು; ಮೂರು ರಂಗಭೂಮಿಯವು. ಈ ದೃಷ್ಟಿಯಿಂದಲೂ ಇಲ್ಲಿ ಎರಡು ಗುಂಪುಗಳನ್ನು ಕಾಣಬಹುದಾಗಿದೆ. ಬಾನುಲಿಯ ರೂಪಕಗಳಲ್ಲಿ ನಿವೇದಕನ ಮೂಲಕವಾಗಿಯೇ ನಾಟಕದ ವಸ್ತುವಿನ ಬೆಳವಣಿಗೆಯನ್ನು ಸೂಚಿಸಬೇಕಾಗಿ ಬಂದು ನಾಟಕ ವಿಕಾಸದ ಪರಿಣಾಮ ಅಷ್ಟೊಂದು ಸ್ಫುಟವಾದಂತೆ ತೋರುವುದಿಲ್ಲ. ಇನ್ನುಳಿದ ಮೂರು ರೂಪಕಗಳಲ್ಲಿ ವಿಕಾಸವನ್ನು ಸ್ಪಷ್ಟವಾಗಿ ಗುರುತಿಸಬಹುದು. ಹೊನ್ನಮ್ಮನ ಜೀವನಚಿತ್ರದಲ್ಲಿ ವಸ್ತುವು ತೆಳುವಾಗಿಯೇ ಉಳಿದಿದೆ. ಕಂತಿಯನ್ನು ಕುರಿತ ಕೃತಿಯಲ್ಲಿ ಕಲ್ಪಿತ ಪಾತ್ರಗಳ ಪ್ರಯೋಜನವನ್ನು ಪಡೆದುಕೊಳ್ಳಲಾಗಿದೆ. ಮಾಯಾದೇವಿಯನ್ನು ಕುರಿತ ರೂಪಕಕ್ಕಾಗಿ ಪ್ರಭುಲಿಂಗಲೀಲೆಯು ನಾಟಕಗುಣ–ಪ್ರಭಾವದ ಸನ್ನಿವೇಶಗಳನ್ನು ವಿಪುಲವಾಗಿಯೇ ಒದಗಿಸುತ್ತಿದೆ.

( ೪ )

ಕನ್ನಡದ ಕವಿಚಕ್ರವರ್ತಿಗಳಲ್ಲಿ ಒಬ್ಬನಾದ ಜನ್ನನ ಉತ್ಕೃಷ್ಟ ಕಾವ್ಯ ಯಶೋಧರ ಚರಿತೆ. ಅದರಲ್ಲಿಯ ಅಮೃತಮತಿಯ ಕಥಾನಕವು ಕನ್ನಡ ವಿಮರ್ಶಕರ ಮನವನ್ನು ಬಹಳವಾಗಿ ಸೆಳೆದಿದೆ. ಆ ಕಾವ್ಯದಲ್ಲಿ ಉದಾತ್ತವಾದ ಧಾರ್ಮಿಕ, ಸೂಕ್ಷ್ಮವಾದ ನೈತಿಕ ಹಿನ್ನೆಲೆಯಲ್ಲಿ ಅಮೃತಮತಿಯ ವಿಕೃತ ಪ್ರಣಯದ ಸನ್ನಿವೇಶವಿದೆ. ಆದರೆ ಪ್ರಣಯ ಕಥೆಯನ್ನು ಮಾತ್ರ ಉದ್ದೇಶಿ

ಸುವ ಈ ಲೇಖಕರು ಅದನ್ನು ಆ ಧಾರ್ಮಿಕ, ನೈತಿಕ ಹಿನ್ನೆಲೆಯಿಂದ ಬೇರ್ಪಡಿಸಿದ್ದಾರೆ. ಮೂಲಕಾವ್ಯದ ಹಿನ್ನೆಲೆಯಲ್ಲಿಯೂ ಅಮೃತಮತಿಯ ವಿಕೃತ ಮೋಹ ಮತ್ತು ನಂತರದ ವಂಚನೆ ಕ್ರೌರ್ಯಗಳು ಅಸಹ್ಯವೆಂದು ಭಾಸವಾಗುತ್ತಿವೆ. ಅವಳಿಗೊದಗಿದ ಭೀಕರವಾದ ಶಿಕ್ಷೆಯಿಂದಲೂ ಅಷ್ಟವಂಕನ ಬಗೆಗೆ ಅವಳ ಮೋಹ—ನಿಷ್ಠೆಯೆನ್ನಬಹುದೇ ?–ಎಂದಿನಂತೆ ಉಳಿಯುತ್ತಿದೆ. ಅವಳ ಅಧಃಪತನ ಜುಗುಪ್ಸೆಯನ್ನು ತರುತ್ತಿದೆ. ನಿಜ. ಆದರೆ ಅವಳು ಅದನ್ನು ವಿಧಿಯ ಆಟದ ಕೈಗೊಂಬೆಯೆಂಬ ಸಮಾಧಾನವನ್ನು ಜನ್ನನ ಕಾವ್ಯವು ಮೂಡಿಸುವಂತಿದೆ. ಅವಳ 'ನಾಯ ಬಸನಿಗತನ'ವನ್ನು ಜೈನಧರ್ಮದ ಅಮೋಘ ಸಂದೇಶದ ಹಿನ್ನೆಲೆಯಲ್ಲಿ ಮಾತ್ರ ಕೆಲಮಟ್ಟಿಗೆ ಮರೆಯಲು ಸಾಧ್ಯವಾದೀತು. 'ನಲ್ಲರ ಮೆಯ್ಯೊಳ್ ಪೊಲ್ಲಮೆಯೆ ಲೇಸು' ಎಂಬ ಸಿದ್ಧಾಂತಕ್ಕೆ ಇಳಿದ ಅಮೃತಮತಿಯು ಧರ್ಮನಿರತನೂ, ಮೋಹಕ ವ್ಯಕ್ತಿತ್ವವುಳ್ಳವನೂ ಆದ ಯಶೋಧರನನ್ನೂ ವಂಚಿಸಿದಳು. ಯಶೋಧರನನ್ನು ತೊರೆಯುವ ಅಮೃತಮತಿಯು ಅಮೃತಾನ್ನವನ್ನೇ ಚೆಲ್ಲಿಕೊಟ್ಟಳು. 'ರತ್ನಾಜಿ'ಯೂ ಅಂಬಲಿಗೆ ಆಸೆಪಟ್ಟು ಅಮೃತಾನ್ನವನ್ನು, ಕಂಬಳಿಗೆ ಆಸೆಪಟ್ಟು ದೇವಮಂದಿರವನ್ನು ಬಿಟ್ಟುಕೊಡಲು ಸಿದ್ಧಳಾದಳು. ಆದರೆ ಅಲ್ಲಿ ವಿಷಮ ದಾಂಪತ್ಯದ ಅಸಫಲತೆಯ ಹಿನ್ನೆಲೆಯಿದೆ. ಅಲ್ಲದೆ ಆ ಹಿನ್ನೆಲೆಯಲ್ಲಿ ಪರದಾರಸೋದರ ಕುಮಾರರಾಮನ ವ್ಯಕ್ತಿತ್ವದ ಉಜ್ವಲತೆಯೂ ಬೆಳಗುತ್ತಿದೆ. ಅಮೃತಮತಿ, ರತ್ನಾಜಿ ಇಬ್ಬರೂ 'ತಪ್ಪಿ ನಡೆದ ಪೆಣ್'ಗಳು; ಜಾರಿದವರು. ಆದರೆ ಅವೆರಡೂ ಚಿತ್ರಗಳೂ ಭಿನ್ನದೃಷ್ಟಿಯವಾಗಿವೆ. 'ಮಾಯೆ'ಯೂ ಮೋಹಕ್ಕೆ ಪಕ್ಕಾದವಳೇ. ಆದರೆ ಆಕೆಯು ಲೌಕಿಕ ದೃಷ್ಟಿಯಲ್ಲಿ, ಅಂಬಲಿಗೆ ಆಸೆಪಟ್ಟು ಅಮೃತಾನ್ನವನ್ನು ಚೆಲ್ಲಿಕೊಟ್ಟವಳಾಗಿಲ್ಲ. ಅಲ್ಲಿ ಸಂಚಲ ಮನದ ಮೋಹವು ಶಿವಾನುಭವವನ್ನು ನಿರ್ಲಕ್ಷಿಸಿದ ಸನ್ನಿವೇಶವಿದೆ ತಾಮಸಕ್ಕೆ ಪಕ್ಕಾಗಿ ದಿವ್ಯವನ್ನು ಚೆಲ್ಲಿಕೊಟ್ಟ ಉದಾಹರಣೆಯದು. ಹೀಗೆ ಈ ಮೂವರು ನಾಯಿಕೆಯರು ಅರ್ಥಪೂರ್ಣವಾದ ಮೂರು ಬಗೆಯಲ್ಲಿ ಚಿತ್ರಣ ಪಡೆದಿದ್ದಾರೆ.

ಗಾಯನದ ಸವಿ, ಮದ್ದಲಿಯ ಮಧುರವಾದ ಧ್ವನಿ ಇವೆರಡೂ ಒಂದೇ ಬಗೆಯಾಗಿ ಅಮೃತಮತಿ ಮಾಯೆಯರನ್ನು ಮೋಹಗೊಳಿಸಿವೆ. ಅವಕ್ಕೆ ಕಾರಣ

ರಾವ ವ್ಯಕ್ತಿಗಳ ಬಗೆಗೆ ಅವರಿಬ್ಬರ ಕಾತರವೂ ಒಂದೇ ಬಗೆಯಾಗಿ ಮೂಡಿ ಬಂದಿದೆ. ಕೆಳದಿಯರನ್ನು ಕಳಿಸುವಲ್ಲಿ, ಅವರವರ ರೂಪದ ವರ್ಣನೆಯನ್ನು ಆಲಿಸುವಲ್ಲಿ ಅದೇರೀತಿಯ ನಿರ್ಭರತೆಯಿದೆ. ಆದರೆ ಒಬ್ಬ ಅಷ್ಟವಂಕ ಮಾವುತ, ಇನ್ನೊಬ್ಬ ದೈವೀರೂಪ ಸಂಪನ್ನ. ಕೆಳದಿಯ ಕಟುವಾತೂ ಕೂಡ ಅಮೃತ ಮತಿಯ ಕಾತರವನ್ನು ಹೆಚ್ಚಿಸಿತು. ತಮದ ರೂಪದಲ್ಲಿದ್ದ ' ಮಾಯೆ ' ಅಲ್ಲಮ ನೆಂಬ ಸೂರ್ಯನನ್ನು ಸೇರುವ ಹುಚ್ಚು ಸಾಹಸಕ್ಕೆ ಅಣಿಯಾದಳು. ರತ್ನಾಜಿ ಯಂತೂ ಡೊಂಬಿತಿಯಂತೆ. ಆಕೆ ಸೇಡಿನ ಹೀನತನಕ್ಕಿಳಿದಳು ಹೀಗೆ ಮೋಹದ ಅಸಫಲತೆಯ ಮೂರು ಚಿತ್ರಗಳು ಇಲ್ಲಿವೆ. ಇವುಗಳಲ್ಲಿ ಒಂದು ಪ್ರಣಯ ವಿಕೃತ; ಇನ್ನೊಂದು ವಿಷಮ; ಮಗುದೊಂದು ದೈವೀ ಯೋಜನೆಯ ಒಂದು ಪಾರ್ಶ್ವ ಮಾತ್ರ. ' ಪ್ರಭುಲಿಂಗಲೀಲೆ 'ಯಲ್ಲಿಯ ಅಕ್ಕಮಹಾದೇವಿಯ ಕಥಾ ನಕವು ಇನ್ನೊಂದು ಪಾರ್ಶ್ವವಾಗಿದೆ. ಆದರೆ ಮಾಯಾದೇವಿಯ ಕಥಾನಕಕ್ಕೆ ಸ್ವಯಂಪೂರ್ಣವಾದ ಘಟಕವಾಗಬಲ್ಲ ಅನುಕೂಲತೆಯಿದೆ. ಆದರೆ ಯಶೋ ಧರ ಚಂದ್ರಮತಿಯರ ಕಥೆಯನ್ನುಳಿದ ಅಮೃತಮತಿಯ ಕಥಾನಕ ಸ್ವಯಂ ಪೂರ್ಣ ಘಟಕವಲ್ಲ.

ಮೂರು ಭಿನ್ನ ಬಗೆಯ ಚಿತ್ರಗಳನ್ನು ಪೋಣಿಸಿದ ಈ ಲೇಖಕರು ಓದು ಗರಿಗೆ ರಸವತ್ತಾದ ಅನ್ನವನ್ನು, ಪ್ರಚೋದಕವಾದ ವಿಚಾರವನ್ನು ಒದಗಿ ಸಿದ್ದಾರೆ.

( ೫ )

ಕವಿ ಕಾವ್ಯ ಜೀವನವನ್ನು ಚಿತ್ರಿಸುವ ಇನ್ನೆರಡು ರೂಪಗಳು ಬಹು ತೆಳುವಾದ ವಸ್ತುವನ್ನು ಬಳಸಿಕೊಳ್ಳಬೇಕಾಗಿದೆ. ' ಹದಿಬದೆಯ ಧರ್ಮ 'ದ ಕಾವ್ಯಸಂಭವದ ಸಂದರ್ಭವು ರಸವತ್ತಾಗಿಯೇ ಇದೆ. ಆದರೆ ಅಲ್ಲಿ ನಾಟಕ ಗುಣ—ಪ್ರಭಾವವುಳ್ಳ ಸನ್ನಿವೇಶಗಳು ಹೆಚ್ಚಾಗಿ ದೊರೆಯಲಾರವು. ಅಂತೆಯೆ ' ಫಲದ ಆಶೆ 'ಯಲ್ಲಿ ಹಬ್ಬುಗೆಯಿಲ್ಲ. ಕಂತಿಯ ಜೀವನಕ್ಕೆ ಸಂಬಂಧಪಟ್ಟ ' ಅಭಿಮಾನಿ 'ಯಲ್ಲಿ ಕೆಲವು ಪಾತ್ರಗಳನ್ನು, ಸನ್ನಿವೇಶಗಳನ್ನು ಕಲ್ಪಿಸಿ ಕೊಂಡು ಶ್ರೀ ವರದರಾಜರು ಅದು ಕಳೆಗಟ್ಟುವಂತೆ ಚಿತ್ರಿಸಿದ್ದಾರೆ.

ದಂತಕಥೆಯ ಆಧಾರವನ್ನು ಒಪ್ಪಿದರೂ ಕನ್ನಡದ ಉದ್ದಾಮ ಕವಿ, ಧರ್ಮ ಜೀವಿ ನಾಗಚಂದ್ರನ ಮತ್ಸರದ ಭಾವ ಮೂಡಿಬಂದ ಬಗೆ ಪ್ರಿಯವೆನಿಸ ಲಿಕ್ಕಿಲ್ಲ ಆದರೆ ಅಲ್ಲಿಯ ಮಾನವ ಸ್ವಭಾವದ ಚಿತ್ರಣ, ನಾಟಕಗುಣದ ಪರಿಣಾಮದಿಂದ ಕೂಡಿದೆ. ಶ್ರೀ ವರದರಾಜರು ಕಲ್ಪಿಸಿದ ಪಾತ್ರಗಳು ಕಳೆ ದುಂಬಿ ನಿಂತಿವೆ. ಇಲ್ಲಿಯ ಸಂವಾದಗಳೂ ಚುರುಕಾಗಿವೆ. ಗಂಡಸರನ್ನು ಕುರಿತ ಹೆಣ್ಣುಮಕ್ಕಳ ಖಂಡನೆಯ ಮಾತುಗಳಿಗೆ ವಾಡಿಕೆಯ ಅನುಭವದ ಬೆಂಬಲವಿದೆ. ಹೊನ್ನಮ್ಮನ ಕಾವ್ಯದ ಸಾಕ್ಷಿಯೂ ಇದೆ. 'ಫಲದ ಆಶೆ'ಯಲ್ಲಿ ಭಾವದ ಮಾಧುರ್ಯ ಸಹಜವಾಗಿ ಅರಳಿ ನಿಂತಿದೆ.

ಈ ರೂಪಕಗಳಲ್ಲಿ ಮೂಡಿಬಂದಿರುವ ಇಬ್ಬರು ಕನ್ನಡ ಕವಯಿತ್ರಿಯರ ಜೀವನಚಿತ್ರ ಸ್ವಾರಸ್ಯಕರ; ಉಪಯುಕ್ತ.

( ೬ )

ಕನ್ನಡ ಕಾವ್ಯದ ಅಭ್ಯಾಸಿಗಳ ಮನವನ್ನು ಆಕರ್ಷಿಸಿದ, ಮೆಚ್ಚಿಸಿದ ಇಲ್ಲಿಯ ಕಾವ್ಯವಸ್ತುವನ್ನು ಕುರಿತ ಪ್ರಬಂಧಗಳು, ಜೀವನಚಿತ್ರಗಳು ಗಣ ನೀಯ ಸಂಖ್ಯೆಯಲ್ಲಿ ಈಗಾಗಲೆ ಬಂದಿವೆ. ಅಂತಹ ವಸ್ತುವನ್ನು ನಾಟಕ ಕ್ಕಾಗಿ ಬಳಸಿಕೊಳ್ಳುವ ಹೊಸ ಪ್ರಯೋಗಕ್ಕೆ ಈ ಲೇಖಕರು ಅಣಿಯಾಗಿ ದ್ದಾರೆ. ಈ ಪ್ರಯೋಗ ಯಶಸ್ವಿಯಾಗಬಲ್ಲುದೆಂದು ಈ ಕೃತಿಯು ತೋರಿ ಸುತ್ತಿದೆ. 'ರತ್ನಾಜಿ' 'ಅಭಿಮಾನಿ'—ಈ ರೂಪಕಗಳು ಈ ಲೇಖಕರು ಒಳ್ಳೆಯ ನಾಟಕಗಳನ್ನು ಬರೆಯಬಲ್ಲರೆಂಬುದಕ್ಕೆ ನಿದರ್ಶನಗಳನ್ನು ಒದಗಿ ಸುತ್ತಿವೆ.

ಸಾಹಿತ್ಯ ಗುಣಯುಕ್ತವಾಗಿ, ರಂಗಭೂಮಿಯ ಮೇಲೆ ಪರಿಣಾಮಕಾರಿ ಯಾಗಬಲ್ಲ ಸದಭಿರುಚಿಯ ನಾಟಕಗಳ ಅಭಾವ ಕನ್ನಡದಲ್ಲಿ ಎಂದಿನಂತೆ ಇಂದಿಗೂ ಉಳಿದಂತಿದೆ. ನಮ್ಮ ಸಾಹಿತ್ಯದ ಇನ್ನಿತರ ರೂಪಗಳಲ್ಲಿ ಹೊಸ ಬೆಳೆ, ಹೊಸ ಕಳೆ ಕಂಡುಬಂದಿವೆ. ನಾಟಕಗಳ ವಿಷಯದಲ್ಲಿ ಮಾತ್ರ ಈ ಮಾತನ್ನು ಅಷ್ಟೊಂದು ಧೈರ್ಯದಿಂದ ಹೇಳಲು ಬರುವಂತಿಲ್ಲ. ಬಾನುಲಿ ನಾಟಕಗಳ ಸೃಷ್ಟಿ ರಂಗಭೂಮಿಯ ನಾಟಕಗಳ ರಚನೆಯನ್ನು ಕುಂಠಿತ

ಗೊಳಿಸಿದೆಯೋ ಏನೋ. ಇಲ್ಲವೆ ರಚಿತವಾದ ನಾಟಕಗಳು ಪ್ರಕಟನೆಯ ಹಾದಿಯನ್ನು ಕಾಯುತ್ತ ಕುಳಿತಿವೆಯೋ? ನಾಟಕ ಪ್ರಯೋಗದ ಸಂದರ್ಭಗಳಂತೂ ದಿನದಿನಕ್ಕೆ ಹೆಚ್ಚುತ್ತಿವೆ. ಇಂತಹ ಪರಿಸ್ಥಿತಿಯಲ್ಲಿ ಶ್ರೀ ವರದರಾಜರು ವಸ್ತುವಿಗಾಗಿ ಹೊಸ ಕ್ಷೇತ್ರವನ್ನು ಆರಿಸಿಕೊಂಡು, ನಾಟಕ ಬರೆದು, ಪ್ರಕಟಿಸುತ್ತಿರುವುದು ಸಂತೋಷದ ಸಂಗತಿಯಾಗಿದೆ. ರಸವಂತಿಕೆ, ಭಾಷಾ ಶೈಲಿಯ ಹಿಡಿತ, ಸ್ವಭಾವಚಿತ್ರಣ ಇವುಗಳಿಂದಾಗಿ ಅವರ ಈ ರಚನೆ ಸಫಲವಾಗುವುದೆಂದೂ ನಂಬುತ್ತೇನೆ. ಈ ಬಗೆಯ 'ಫಲ ಸಂಚಯ' ವಿಕಾಸಗೊಳ್ಳಲಿ, ಎಂದು ಹಾರೈಸುತ್ತೇನೆ.

ಪ್ರಾಧ್ಯಾಪಕ ನಿಲಯ
ಧಾರವಾಡ
೮-೧೨-೫೭

ಸ. ಸ. ಮಾಳವಾಡ

# ಲೇಖಕನ ನುಡಿ

" ಅಮೃತಮತಿ " ನಾಟಕಸಂಗ್ರಹದಲ್ಲಿರುವ ನಾಟಕಗಳನ್ನು ಬೇರೆ ಬೇರೆ ಸಮಯದಲ್ಲಿ ಬರೆಯುತ್ತ ಬಂದಿರುವೆ. ವಿಶಿಷ್ಟವಾದ ವಿಷಯಗಳುಳ್ಳ ಈ ನಾಟಕಸಂಗ್ರಹ ಪ್ರಕಟವಾಗುವ ಸುಸಮಯ ಇದೀಗ ಬಂದೊದಗಿದೆ. ಅದಕ್ಕೆ ಮುಖ್ಯ ಕಾರಣರು ನನ್ನ ಮಿತ್ರರಾದ ಶ್ರೀ ಭಾಲಚಂದ್ರ ಘಾಣೇಕರ ಅವರು.

ಹಳೆಗನ್ನಡ ಕಾವ್ಯಗಳಲ್ಲಿ ನಾಟಕಗಳಿಗೆ ಯೋಗ್ಯವಾದ ವಸ್ತು ಇವೆ ಯೆಂಬುದು ಕಾಲೇಜಿನಲ್ಲಿ ನಾನು ಅಭ್ಯಾಸ ಮಾಡುವಾಗಿನಿಂದಲೂ ಬಹಳ ಅನಿಸುತ್ತಿತ್ತು. ನನ್ನ ಅಭ್ಯಾಸದ ಸಮಯದಲ್ಲಿ ಅಂಥ ವಿಷಯಗಳನ್ನು ಗುರುತಿಸಿ ಇಟ್ಟುಕೊಂಡಿದ್ದೆ. ಅಮೃತಮತಿ, ರತ್ನಾಜಿ, ಮಾಯೆಯ ಮೋಹ ಇವು ಅಂಥ ನಾಟಕಗಳಲ್ಲಿ ಕೆಲವು. ಹಲವು ಚಿಕ್ಕ ಬದಲಾವಣೆಗಳೊಂದಿಗೆ ಕವಿ ಗಳ ಕಾವ್ಯವಸ್ತುವನ್ನು ನಾಟಕಗಳಲ್ಲಿ ರೂಪಿಸಿದೆ. ಹಳೆಗನ್ನಡ ಭಾಷೆಯನ್ನು ಹೊಸಗನ್ನಡಕ್ಕೆ ಪರಿವರ್ತಿಸಿ, ಕವಿಗಳ ಶೈಲಿಯ ಸತ್ವವನ್ನು ಹಾಗೆಯೇ ಇಡಲು ಪ್ರಯತ್ನಿಸಿದೆ.

ಕವಿಯಿತ್ರಿಯರ ಜೀವನಚಿತ್ರವನ್ನು ರಂಗಭೂಮಿಯ ಮೇಲೆ ತೋರಿಸ ಬೇಕೆಂಬ ಆಕಾಂಕ್ಷೆಯಿಂದ ಅಭಿಮಾನಿ ಮತ್ತು ಫಲದ ಆಶೆ ಈ ನಾಟಕಗಳನ್ನು ಬರೆಯಲಾಗಿದೆ. ಕನ್ನಡ ಕಾವ್ಯಗಳಲ್ಲಿ ದೊರೆಯುವ ಅಲ್ಪ ವಸ್ತುವನ್ನೇ ಆಯ್ದುಕೊಂಡು, ದೃಶ್ಯಗಳನ್ನು ರಚಿಸಲಾಗಿದೆ. ಇವೆರಡೂ ನಾಟಕಗಳಲ್ಲಿ ವಸ್ತುವಿನೊಂದಿಗೆ, ಕಲ್ಪನಾಲಹರಿಯೂ ಇದೆ.

ಅಭಿಮಾನಿ, ಫಲದ ಆಶೆ, ಮಾಯೆಯ ಮೋಹ ಇವು ರಂಗಭೂಮಿಯ ಮೇಲೆ ಬರುವಂಥ ನಾಟಕಗಳಿವೆ. ಇವುಗಳನ್ನು ನಾಟಕವಾಡಿ ತೋರಿಸಿದರೆ, ನಮ್ಮ ಹಳೆಗನ್ನಡದಲ್ಲಿರುವ ಕಾವ್ಯವಸ್ತುವಿನ ಬಗ್ಗೆ, ಸಾಹಿತ್ಯದ ಬಗ್ಗೆ ಜನತೆ ಯಲ್ಲಿ ಅಭಿಮಾನ, ಆದರೆ ಹುಟ್ಟುವವೆಂದು ನಂಬಿರುವೆ.

ಅಮೃತಮತಿ, ರತ್ನಾಜಿ ಇವು ಬಾನುಲಿ ನಾಟಕಗಳು. ಅಮೃತಮತಿ ಬಾನುಲಿ ನಾಟಕವು ಧಾರವಾಡ ಆಕಾಶವಾಣಿಯಿಂದಲೂ, ಮೈಸೂರು ಆಕಾಶ ವಾಣಿಯಿಂದಲೂ ಈಗಾಗಲೇ ಪ್ರಸಾರವಾಗಿ ಜನರ ಮೆಚ್ಚುಗೆ ಪಡೆದಿದೆ. ರತ್ನಾಜಿ ಈ ನಾಟಕವು ಧಾರವಾಡ ಆಕಾಶವಾಣಿಯಿಂದ ಪ್ರಸಾರವಾಗಿದೆ. ಈ ನಾಟಕವನ್ನು ಬರೆಯಲು ದಿವಂಗತ ಹುಲ್ಲೂರ ಶ್ರೀನಿವಾಸ ಜೋಯಿಸರು ನನಗೆ ಉತ್ಸಾಹಕೊಟ್ಟರು; ಕೆಲವು ಸಾಂಗತ್ಯಗಳನ್ನು ನನ್ನ ಕಡೆಗೆ ಕಳುಹಿಸಿ, ಮಹದುಪಕಾರ ಮಾಡಿದರು. ಬಾನುಲಿ ನಾಟಕ ಬರೆಯಲು ನನಗೆ ಅತ್ಯಂತ ಪ್ರೋತ್ಸಾಹನ ಕೊಟ್ಟವರು ಮಿತ್ರರಾದ ಎಚ್. ಕೆ. ರಂಗನಾಥ ಮತ್ತು ಎನ್. ಕೆ. ಕುಲಕರ್ಣಿಯವರು.

ಹಿರಿಯ ಸಾಹಿತಿಗಳೂ, ವಿಮರ್ಶಕರೂ ಆದ ಶ್ರೀ. ಸ. ಸ. ಮಾಳವಾಡ ಅವರು ನನ್ನ ಈ ನಾಟಕಸಂಗ್ರಹಕ್ಕೆ ಮೊದಲಮಾತು ಬರೆಯಲು ನಾನು ಬಿನ್ನವಿಸಿಕೊಳ್ಳುವ ಮೊದಲೇ ಒಪ್ಪಿಕೊಂಡು, ಬಿಡುವಿಲ್ಲದ ಸಮಯದಲ್ಲಿ ಅಮೂಲ್ಯ ನುಡಿಗಳನ್ನು ನನ್ನ ಕೃತಿಗಳ ಬಗ್ಗೆ ಬರೆದಿದ್ದಾರೆ; ನನಗೆ ಚೇತನೆ ನೀಡಿದ್ದಾರೆ. ಅವರಿಗೆ ನನ್ನ ಅನಂತ ನೆನಿಕೆಗಳು.

ಭಾಲಚಂದ್ರ ಘಾಣೇಕರ, ಎಚ್. ಕೆ. ರಂಗನಾಥ, ಎನ್. ಕೆ. ಕುಲಕರ್ಣಿ, ರಂ. ಶ್ರೀ. ಮುಗಳಿ ಮತ್ತು ನನಗೆ ಪ್ರೋತ್ಸಾಹನೆ ಕೊಟ್ಟ ಇತರ ಮಿತ್ರರಿಗೆ ನಾನು ಅತ್ಯಂತ ಕೃತಜ್ಞನಾಗಿರುವೆ. ಕೆಲವು ನಾಟಕಗಳನ್ನು ಪ್ರಸಾರಮಾಡಿದ ಆಕಾಶವಾಣಿ ಕೇಂದ್ರಗಳಿಗೂ, ಕೆಲವು ನಾಟಕ ಈಗಾಗಲೇ ಪ್ರಕಟಿಸಿ ಪ್ರೋತ್ಸಾಹಿಸಿದ ಪತ್ರಿಕೆಗಳಿಗೂ ನನ್ನ ನೆನಿಕೆಗಳು ಸಲ್ಲುತ್ತವೆ.

ಸಾಧನಕೇರಿ
೧೫–೧೨–೫೭

—ವರದರಾಜ ಹುಯಿಲಗೋಳ

# ಪರಿವಿಡಿ

# ಅಮೃತಮತಿ

[ಮಹಾಕವಿ ಜನ್ನನ " ಯಶೋಧರ ಚರಿತೆ "ಯಲ್ಲಿ ಅಮೃತಮತಿ ಮತ್ತು ಮಾವುತನ ಸುಂದರವಾದ ಪ್ರಣಯಕಥೆ ಬರುತ್ತದೆ. ಜನ್ನನು ಉಲ್ಲೇಖಿಸಿದ ರೀತಿಯಂತೆಯೇ 'ಅಮೃತಮತಿ' ಬಾನುಲಿ ನಾಟಕ ವನ್ನೇ ಬರೆದಿದೆ. ಇಲ್ಲಿ ಧಾರ್ಮಿಕ ವಿಚಾರಗಳಿಗಿಂತ ಪ್ರಣಯದ ಕಡೆಗೆ ಪ್ರಾಧಾನ್ಯ ಕೊಟ್ಟಿದೆ.]

ಪಾತ್ರಗಳು :

೧. ಯಶೋಧರ — ಅವಂತಿದೇಶದ ರಾಜ
೨. ಅಮೃತಮತಿ — ರಾಣಿ
೩. ಚಂದ್ರಮತಿ — ಯಶೋಧರ ರಾಜನ ತಾಯಿ
೪. ಮೈತ್ರೇಯಿ — ಅಮೃತಮತಿಯ ದೂದವಿ
೫. ಅಷ್ಟವಂಕ — ಪಟ್ಟದಾನೆಯ ಮಾವುತ
೬. ನಿವೇದಕ
೭. ಆತ್ಮಶಕ್ತಿ
೮. ಬೆಂತರ

ಮುಂತಾದವರು

# ದೃಶ್ಯ ೧

**ನಿವೇದಕ**— ಉಜ್ಜಯಿನಿ ಪಟ್ಟಣ ! ರಾತ್ರಿಯ ಸಮಯ ! ಪುರಜನರೆಲ್ಲ ಗಾಢನಿದ್ರೆಯಲ್ಲಿದ್ದಾರೆ. ರಾಣಿ ಅಮೃತಮತಿ ತನ್ನ ಶಯ್ಯಾಗೃಹದಲ್ಲಿ ತನ್ನ ಹೃದಯಪ್ರಿಯನಾದ ಯಶೋಧರರಾಜನ ತೋಳತಕ್ಕೆಯಲ್ಲಿ ನಿದ್ರಾಪರವಶಳಾಗಿದ್ದಾಳೆ. ಎಲ್ಲೆಲ್ಲಿಯಯೂ ಸ್ತಬ್ಧತೆ.

[ರಾತ್ರಿ ೧೨ ಗಂಟೆ ಬಾರಿಸುವ ಸಪ್ಪಳ ತರುವಾಯ ತಿರುಗುವವರ ಧ್ವನಿ...... ಕೊಂಚ ಸಮಯ ಸ್ತಬ್ಧತೆ ! ಆಮೇಲೆ ಅತ್ಯಂತ ಆಕರ್ಷಕವಾದ ಗಾಯನ.]

**ನಿವೇದಕ**— ಸ್ವಪ್ನಮಂದಿರದಲ್ಲಿ ನಲಿದಾಡುವ ಅಮೃತಮತಿಗೆ ಗಾಯನವನ್ನು ಕೇಳಿ ಎಚ್ಚರವಾಯಿತು ! ಅದೆಂಥ ಇಂಪಾದ ಸೊಂಪಾದ ಗಾಯನ ! ಪ್ರಿಯನ ತೋಳುಗಳಿಂದ ದೂರವಾಗಿ ಕರುಮಾಡದ ಹೊರ ಅಂಗಳದಲ್ಲಿ ಅಮೃತಮತಿ ಬಂದು ನಿಂತಿದ್ದಾಳೆ.

**ಅಮೃತಮತಿ**— ಇದೇನು ! ಯಾರು ಹಾಡುತ್ತಿರುವರು ? ಎಂಥ ಅನೂನವಾದ ಅನುಪಮವಾದ ಧ್ವನಿ !.... ...ಇಲ್ಲ, ಈಗ ಏನೂ ಕೇಳಬರುವದಿಲ್ಲವಲ್ಲ !........ಇದೇನು ? ನಾನು ಸ್ವಪ್ನದಲ್ಲಿರುವೆನೆ !....ಇಲ್ಲ....ನಿಜವಾಗಿಯೂ ಇಲ್ಲ. ಇಲ್ಲಿಯೆ ಯಾರೊ ಹಾಡಿದಂತಾಯಿತು. ಆ ಧ್ವನಿಯೆ ನನ್ನನ್ನು ಎಚ್ಚರಿಸಿತು

[ ಮತ್ತೊಮ್ಮೆ ಸುಮಧುರವಾದ ಗಾಯನ ]

ಆಹಾ ! ದಾಹಬಡುತ್ತಿರುವ ನನ್ನ ಕಿವಿಗಳಿಗೆ ಅಮೃತವನ್ನು ಉಣಿಸಿದಂತಾಯಿತು. ಬಳಲಿ ಬೆಂಡಾದ ದಾರಿಕಾರನಿಗೆ ಸುವಿಶಾಲ ಸರೋವರ ಕಂಡಂತಾಯಿತು. ಎಂಥ ಇನಿದನಿ ! ಹಾಡುತ್ತಿರುವವರು ಎಂಥ ಪುರುಷ

ರಿರಬಹುದು ! ಈ ಧ್ವನಿಯು ಎಲ್ಲಿಂದ ಬರುತ್ತಿರುವದು ?... ....ಓಹೋ ಆ ಗಜಶಾಲೆಯಿಂದ. ಯಾರು ಇರಬಹುದು ಆ ಗಜಶಾಲೆಯಲ್ಲಿ ?.... ಯಾರೂ ಕಾಣುವದಿಲ್ಲವಲ್ಲ ! ಇದೇ ದಿನವೇ ಎಷ್ಟು ಕಗ್ಗತ್ತಲೆ !........ ಆಗಸದಲ್ಲಿ ಮಿನುಗುವ ತಾರೆಗಳೆ ಗಜಶಾಲೆಯಲ್ಲಿ ಬೆಳಕ ತೋರ ಲಾರಿರಾ ?

[ ಮತ್ತೆ ಇಂಪಾದ ಗಾಯನದ ಧ್ವನಿ. ]

ಅಯ್ಯೋ, ನನ್ನ ಹೃದಯ ಎಷ್ಟು ಹಾರುತ್ತಿದೆ ! ಇದನ್ನು ಹೇಗೆ ತಡೆಯ ಬಲ್ಲೆ ? ಗಾನದ ಅಮೃತವನ್ನು ಕಿವಿ ಕುಡಿಯಿತು. ಆದರೆ ಕಣ್ಣ ಆಶೆ ಹಾಗೆಯೆ ಉಳಿದಿದೆಯಲ್ಲ ! ಏನು ಮಾಡಲಿ ! ಅಯ್ಯೊ, ಬೆಳಗಾಗುವ ವರೆಗೂ ಹೇಗೆ ಕಾಲ ಕಳೆಯಲಿ ! ಹೇಗೆ ಕಾಲ ಕಳೆಯಲಿ !

## ದೃಶ್ಯ ೨

[ಅರಮನೆಯಲ್ಲಿಯ ಬೆಳಗಿನ ಮಂಗಳವಾದ್ಯಗಳು.]

**ನಿವೇದಕ**— ಅಮೃತಮತಿಗೆ ರಾತ್ರಿಯಲ್ಲಿ ನಿದ್ರೆ ಬರಲಿಲ್ಲ. ಗಾನಕ್ಕಾಗಿ ಮಾರು ಹೋದ ಮನಸ್ಸು ಹಾಡುಗಾರನಿಗೆ ತನ್ನ ದೇಹವನ್ನೆ ಅರ್ಪಿಸಿತು. ಬೆಳಗಾಗುವ ದೊಂದೇ ತಡ, ತನ್ನ ಹೃದಯದ ದೂದವಿಯಾದ—ಮೈತ್ರೇಯಿಯನ್ನು ಅವ ನನ್ನು ನೋಡಿಕೊಂಡು ಬರಲು ಕಳುಹಿದ್ದಾಳೆ. ಅಷ್ಟು ಆತುರತೆ ಅಮೃತಮತಿ ಯದು ! ಗೂಢವಿಯು ದಾರಿಯೇ ಕಣ್ಣಾಗಿ ರಾಣಿಯು ನಿಂತಿರುವಳು !

**ಅಮೃತಮತಿ**— ( ಆತುರತೆಯಿಂದ ) ಇನ್ನೂ ಬರಲಿಲ್ಲ ! ಎಲ್ಲಿಗೆ ಹೋದಳೊ? ಯಾರಿಗಾದರೂ ನನ್ನಂತರಂಗ ತಿಳಿಸಿದಳೊ ? ಛೇ, ಅವಳು ಹಾಗೆ ಮಾಡುವದು ಶಕ್ಯವಿಲ್ಲ. ಬಹುತರವಾಗಿ ಆ ಗಜಶಾಲೆಯಲ್ಲಿ ಯಾರೂ ಇಲ್ಲವೋ ಏನೋ ! ( ಆನಂದದಿಂದ ) ಮೈತ್ರೇಯಿ, ಏನದು ಸುದ್ದಿ ? ಬೇಗ ಹೇಳು........ಏಕೆ ಕೆಳಮೊಗ ಮಾಡಿದೆ? ಸುದ್ದಿಯನ್ನು ತಿಳಿಸುವ ದಿಲ್ಲೇಕೆ ?

**ಮೈತ್ರೇಯಿ**— ( ಅಣಕಿನಿಂದ ) ಹೀಗೆ ಇರುವ ಕಾಮದೇವನನ್ನು ಎಲ್ಲಿಂದ ಹುಡುಕಿದಿರಿ ?

**ಅಮೃತಮತಿ**— ಕಾಮದೇವ ! ಅಷ್ಟೊಂದು ಸುಂದರನೇ ? ಹಾಗಿದ್ದರೆ ನಿನ್ನ ಕೆಳವೊಗವೇಕೆ ?

**ಮೈತ್ರೇಯಿ**— ( ಚೇತರಿಸಿ ) ಏನೂ ಇಲ್ಲ ರಾಣಿಯವರೇ, ನೀವು ಕಾಮ ದೇವನ ಕೈಯಲ್ಲಿರುವ ಹೂಬಾಣ. ಅದರಂತೆ ಶೋಭಿಸುವಿರಿ. ಅವನು........?

**ಅಮೃತಮತಿ**— ಕಾಮದೇವನಷ್ಟೇ ಸುಂದರನಲ್ಲವೆ ಆ ಪ್ರಿಯವಲ್ಲಭ ?

**ಮೈತ್ರೇಯಿ**— ( ಆಶ್ಚರ್ಯದಿಂದ ) ಪ್ರಿಯವಲ್ಲಭ !!!

**ಅಮೃತಮತಿ**— ಹೀಗೇಕೆ ನಿಲ್ಲುವಿ ? ಬೇಗ ಮಾತನಾಡು. ನೀನು ಮಾತ ನಾಡದಿದ್ದರೆ ನಿನ್ನ ಮೌನದ ಈಟಿಯಿಂದ ನನ್ನನ್ನು ಕೊಲ್ಲುವೆ.

**ಮೈತ್ರೇಯಿ**— ರಾಣಿಯವರೆ, ಕೋಪಿಸಬಾರದು. ನೀವು ಹೇಳಿದ ಗಜಶಾಲೆ ಯಲ್ಲಿ ನೋಡಿದೆ. ಅಲ್ಲಿ ವಿಚಾರಿಸಿದೆ.

**ಅಮೃತಮತಿ**— ನಿನ್ನೆ ಹಾಡಿದವರು ಯಾರಂತೆ ?

**ಮೈತ್ರೇಯಿ**— ನೀವು ಅವರನ್ನು ಪ್ರೀತಿಸುವದೆಂದರೆ ?

**ಅಮೃತಮತಿ**— ಮೈತ್ರೇಯಿ, ಏನಾದರೊಂದು ಸುಮ್ಮನೆ ಗಳವಬೇಡ. ಯಾರೆಂಬದನ್ನು ತೀವ್ರ ಹೇಳು.

**ಮೈತ್ರೇಯಿ**— ನಮ್ಮ ಪಟ್ಟದಾನೆಯ ಮಾವುತ. ತನ್ನ ವಿನೋದಕ್ಕಾಗಿ ಹಾಡುತ್ತಿದ್ದನಂತೆ.

**ಅಮೃತಮತಿ**— ಮೈತ್ರೇಯಿ, ಈ ಭಂಗಾರದ ಪದಕವನ್ನು ತಿಗೆದುಕೊ. ಈ ದಿನ ಅವನಿಗೆ ಗುಪ್ತವಾಗಿ ನನ್ನ ಕೋಣೆಗೆ ಬರಹೇಳು.

**ಮೈತ್ರೇಯಿ**— ರಾಣಿಯವರೇ........

**ಅಮೃತಮತಿ**— ನಿನಗೆ ಮತ್ತೇನು ಸಂಶಯ ಬಂದಿತು ?

**ಮೈತ್ರೇಯಿ**— ಕೆಟ್ಟ ವಿಧಿಗೆ ಕಣ್ಣಿಲ್ಲವೆಂದು ಹೇಳಬೇಕು.

**ಅಮೃತಮತಿ**— ವಿಧಿಯು ಮಾತು ಈಗೇಕೆ?

**ಮೈತ್ರೇಯಿ**— ಪ್ರೀತಿಯು ಕುರುಡು ಎಂದು ಹೇಳಬೇಕು.

**ಅಮೃತಮತಿ**— ಎಂಥ ವಿಚಿತ್ರ ಮಾತುಗಳನ್ನು ಹೇಳುವಿ! ನನ್ನಂತೆಯೆ ಅವನು ಚೆಲುವನೆಂದು ನೀನೇ ಹೇಳುವಿಯಲ್ಲವೆ? ಮಾವುತನಿದ್ದರೇನಾಯಿತು? ಅವನೂ ಮನುಷ್ಯನಲ್ಲವೆ? ಪ್ರೀತಿಗೆ ಕೀಳು–ಮೇಲು ಎಂಬ ಭೇದ–ಭಾವ ಉಂಟೆ? ಬಣ್ಣಿಸು. ನನ್ನ ಮುಂದೆ ಆತನನ್ನು ಇನ್ನೂ ಬಣ್ಣಿಸು.

**ಮೈತ್ರೇಯಿ**— ರಾಣಿಯವರೆ, ಏನೆಂದು ಬಣ್ಣಿಸಲಿ! ಎಷ್ಟೆಂದು ಹೊಗಳಲಿ!

**ಅಮೃತಮತಿ**— (ಅಷ್ಟು ಸುಂದರನೇ) ಅಷ್ಟು ಸುಂದರನೆ! ಬ್ರಹ್ಮನು ಇಂಥ ಮಾನವನನ್ನು ಹೇಗೆ ನಿರ್ಮಿಸಿದ್ದಾನು! ಧ್ವನಿಯೆ ಇಷ್ಟು ಇಂಪಾಗಿದೆಯೆಂದಮೇಲೆ ಧ್ವನಿಯ ಮನೆಯಾದ ಆ ಶರೀರವು ಎಷ್ಟು ಚೆಲುವಾಗಿರಬೇಕು!

**ಮೈತ್ರೇಯಿ**— (ಅಣಕಿನಿಂದ) ನಾನು ಅದನ್ನೆಂತು ಬಣ್ಣಿಸಲಿ! ಅವನ ಅವಯವಗಳನ್ನೆಲ್ಲ ಅದೆಂತು ನನ್ನ ಶಬ್ದಗಳಿಂದ ಹೇಳಲಿ!

**ಅಮೃತಮತಿ**— (ಹರ್ಷದಿಂದ) ಹೇಳು ಮೈತ್ರೇಯಿ. ನನ್ನ ಹೃದಯ ತವಕಬಡುತ್ತದೆ. ಹೂವ ಮುತ್ತುವ ದುಂಬಿಯಾಗಿದೆ.

**ಮೈತ್ರೇಯಿ**–(ತುಚ್ಛ ಧ್ವನಿಯಿಂದ) ಛೀ, ಛೀ, ದೇವಿಯವರೆ, ಎಂಥ ಮನುಷ್ಯನನ್ನು ಪ್ರೀತಿಸಲು ಇಚ್ಛಿಸುತ್ತಿದ್ದೀರಿ. ಆ ಅಷ್ಟವಂಕನ ಮೂಗು ಹಪ್ಪಳಿಕೆಯಾಗಿದೆ! ಕಿವಿ ಮುರುಟಿದೆ! ಬೆನ್ನು ಬಾಗಿದೆ! ಮೈಬಣ್ಣ ಕರಿದಾಗಿದೆ! ಹೊಟ್ಟೆ ಬೆನ್ನಿಗೆ ಹತ್ತಿದೆ! (ನಗುತ್ತ) ಅವನ ಕಾಲುಗಳನ್ನು ನೋಡಿದರೆ ಟೊಂಕಮುರಿದ ಕತ್ತೆಯ ಕಾಲನ್ನೂ ಮರೆಯಿಸುವುದು.

**ಅಮೃತಮತಿ**— ಸಾಕುಮಾಡು ಮೈತ್ರೇಯಿ, ನೀನು ಹೇಳಿದುದೆಲ್ಲವೂ ಸತ್ಯವೆ? ನಿನ್ನ ನಾಲಗೆಯೆ ಕುಲವನ್ನು ಅರುಹಿತು ಎನ್ನುವಂತೆ ಮಾಡಬೇಡ.

**ಮೈತ್ರೇಯಿ**— ನಿಮ್ಮ ಪಾದಸಾಕ್ಷಿಯಾಗಿ, ನನ್ನ ಕೊರಳಾಣೆ ಮಾಡಿ ಹೇಳು ತ್ತೇನೆ, ದೇವಿಯವರೆ. ನಿಮ್ಮೆದುರಿಗೆ ಎಂದಾದರೂ ನಿಜವನ್ನು ಬಚ್ಚಿಡು ವುದೇ ?

**ಅಮೃತಮತಿ**— ಆಯ್ಯೋ, ತಲೆ ಹೊಡೆಯುತ್ತಿದೆ, ಮೈತ್ರೇಯಿ....ಆಯ್ಯೋ.... (ಕೊಂಚ ವೇಳೆಯ ತರುವಾಯ ಚೇತರಿಸಿ) ಆದರೂ ಯಾವ ಕಾರಣ ದಿಂದಲೊ ನಾನು ಹೇಳಲಾರೆ! ಇದು ನನ್ನ ಸುದೈವವೊ, ದುರ್ದೈವವೊ ನುಡಿಯಲಾರೆ. ನನ್ನ ಹೃದಯವೆಲ್ಲಾ ಅವನ ಬಗ್ಗೆ ತವಕಪಡುತ್ತಿದೆ. ಕಸ್ತುರಿ ಕರಿದಾದರೂ ಅದರ ಗುಣ ಶ್ರೇಷ್ಠವಲ್ಲವೇ ? ಗಂಧದ ಕೊರಡು ಮುರುಡಾದರೂ ಅದರ ಪರಿಮಳ ಇಮ್ಮಡಿಸುವದಿಲ್ಲವೆ? ನಲ್ಲರ ಮೈಯಲ್ಲಿ ಪೊಲ್ಲಮೆಯೆ ಲೇಸು....... ಇದೇ ದಿನ ಆ ಅಷ್ಟವಂಕನಿಗೆ ಬರಹೇಳು, ಮೈತ್ರೇಯಿ........

**ಮೈತ್ರೇಯಿ**— ದೇವಿಯವರ ಮನಸ್ಸಿನ ವಿರುದ್ಧ ನಾನು ಹೇಗೆ ಹೋಗು ವದು! ನಿಮ್ಮ ಆಜ್ಞೆ ಶಿರಸಾವಹಿಸುವೆ. ತಾಯಿ............ನಾನು ಗಜ ಶಾಲೆಗೆ ಹೋದಾಗ ಆ ಅಷ್ಟವಂಕನು ಉತ್ತಮ ಸಂಗೀತಗಾರನೆಂದು ಎಲ್ಲರೂ ಮೆಚ್ಚಿ ಹೇಳಿದರು.

**ಅಮೃತಮತಿ**— ಆಹುದು ಮೈತ್ರೇಯಿ, ಆ ಸಂಗೀತವನ್ನು ಕೇಳಿ ನಿನ್ನಿನ ರಾತ್ರಿಯಿಂದ ಹುಚ್ಚಳಾಗಿದ್ದೇನೆ. ಸಂಗೀತವೇ ಪ್ರೇಮದ ಅಮೃತ! ಸಂಗೀತವೇ ಜೀವನ! ಅದು ಇರದೇ ಹೋದರೆ ಮರಣವೇ ಲೇಸು!

**ಮೈತ್ರೇಯಿ**— ನಮ್ಮ ಯಶೋಧರ ಮಹಾರಾಜರಿಗೆ ಮಾತ್ರ ಸಂಗೀತವೆಂದರೆ ಇಷ್ಟವಿಲ್ಲ. ಅವರು ಯಾವಾಗಲೂ ಧರ್ಮದಲ್ಲಿ ನಿರತರಾದವರು.

**ಅಮೃತಮತಿ**— ಮೈತ್ರೇಯಿ, ನನ್ನ ನಿಜವಾದ ಹೃದಯವನ್ನು ನೀನೆ ತಿಳಿದು ಕೊಂಡಿರುವೆ. ನೀನು ದಾಸಿಯಾದರೂ ಮೈತ್ರೇಯಿ. ತೆಗೆದುಕೊ ಈ ಬಂಗಾರದ ಬಳೆಗಳನ್ನು; ನಾನು ಹೇಳಿದ ಕಾರ್ಯವನ್ನು ತಪ್ಪದೇ ಮಾಡಬೇಕು. ಯಾರಿಗೂ ತಿಳಿಯದಂತೆ ಜಾಗರೂಕವಾಗಿ ಮಾಡ ಬೇಕು.

**ಮೈತ್ರೇಯಿ**— ಅಪ್ಪಣೆ ದೇವಿಯವರೆ!

## ದೃಶ್ಯ ೩

**ನಿವೇದಕ**— ಅಮೃತಮತಿಯ ರೂಪವು ಎತ್ತ? ರೂಪದಲ್ಲಿ ಅಧಮನಾದ ಅಷ್ಟ ವಂಕನು ಎತ್ತ? 'ಚಿತ್ರಮಪಾತ್ರೇ ರಮತೇ ನಾರೀ' ಎಂಬುದು, ಬೆಂದ ಬಿದಿಗೆ ಕಣ್ಣಿಲ್ಲವೆಂಬುದು ಸಮನಿಸಿ ಬಂದವು. ದೂದವಿಯಾದ ಮೈತ್ರೇಯಿಗೆ ಲಂಚ ವನ್ನು ಕೊಟ್ಟು ಸಮಯ ದೊರೆತಾಗಲೆಲ್ಲ ಅಮೃತಮತಿ ಅಷ್ಟವಂಕನ ಸನಿಹದಲ್ಲಿ ಆನಂದದಿಂದ ಕಾಲಕಳೆಯಹತ್ತಿದಳು.

[ ಆನಂದ ಕೊಡುವ ಸಂಗೀತದ ಹಿಮ್ಮೇಳ ]

**ಅಷ್ಟವಂಕ**— ಸಮಯ ಎಷ್ಟಾಗಿದೆ?

**ಅಮೃತಮತಿ**— ಸರಿಯಾಗಿ ರಾತ್ರಿ .. ........!

**ಅಷ್ಟವಂಕ**— ( ನಗುತ್ತ ) ಹನ್ನೆರಡು ಗಂಟೆ!!

**ಅಮೃತಮತಿ**—ಈ ಸಮಯ ನೆನೆದರೆ ದೇಹ ಪುಲಕಿತವಾಗುತ್ತದೆ. ಮೊದಲ ಬಾರಿಗೆ ನಿನ್ನ ಗಾನವನ್ನು ಕೇಳಿ ಮಾರುಹೋದ ಸಮಯ ನೆನಪಿಗೆ ಬರುತ್ತದೆ.

**ಅಷ್ಟವಂಕ**— ಅಹುದು, ಅದು ನನ್ನ ಭಾಗ್ಯವೆಂದು ಹೇಳಬೇಕು.

**ಅಮೃತಮತಿ**— ಅಲ್ಲ, ಅದು ನನ್ನ ಸೌಭಾಗ್ಯ!

**ಅಷ್ಟವಂಕ**— ಈ ನಮ್ಮ ಸೌಭಾಗ್ಯವೆ ದುರ್ಭಾಗ್ಯವಾಗಲಾರದಷ್ಟೆ? ಮಹಾ ರಾಜರಿಗೆ ಈ ಸಂಗತಿ ತಿಳಿದರೆ, ನಮ್ಮ ಗತಿ ಏನಾದೀತು?

**ಅಮೃತಮತಿ**—ಯಾವ ಹೆದರಿಕೆಯೂ ಬೇಡ. ನನಗೆ ಅಷ್ಟು ಮತಿ ಇಲ್ಲವೆ? ಅವರಿಗೆ ಪ್ರತಿನಿತ್ಯ ರಾತ್ರಿ ಮಲಗುವ ಮುನ್ನ ಸವಿಯಾದ ಅಮೃತ ಕುಡಿಸುತ್ತಿದ್ದೇನೆ. ವೈರಿಗಳು ದಂಡೆತ್ತಿ ಬಂದರೂ ಎಚ್ಚರಾಗುವ ಹಾಗಿಲ್ಲ.

**ಅಷ್ಟವಂಕ**— ( ಅತ್ಯಾನಂದದಿಂದ ) ಓಹೋ! ಸ್ತ್ರೀ ಚಾಣಾಕ್ಷಳೆಂದು ಹೇಳ ಬೇಕು.

**ಅಮೃತಮತಿ**— ಬರಿ ಮಾತುಗಳು ಬೇಡ. ನನಗೆ ಗಾನದ ಅಮೃತ ಬೇಕು.

**ಅಷ್ಟವಂಕ**— ಹಾಗಾದರೆ ಹಾಡಲೇ ?. ಏನೂ ಹೆದರಿಕೆಯಿಲ್ಲವಷ್ಟೆ ?

**ಅಮೃತಮತಿ**— ಯಾವ ಚಿಂತೆಯೂ ಬೇಡ.

[ ಅಷ್ಟವಂಕನ ಸುಮಧುರ ಗಾಯನ ]

## ದೃಶ್ಯ ೪

**ನಿವೇದಕ**— ಹಲವು ದಿನಗಳ ನಂತರ ಒಂದು ಮಧ್ಯರಾತ್ರಿ ! ಕೊಂಚ ತಡವಾಗಿ ಅಮೃತಮತಿ ಸಂಕೇತಸ್ಥಳಕ್ಕೆ ಹೊರಟಿದ್ದಾಳೆ. ನಿದ್ದೆ ಹತ್ತಿದವರಂತೆ ಮಲಗಿಕೊಂಡ ಯಶೋಧರ, ರಾಣಿಯು ಎದ್ದು ಹೋದಕೂಡಲೆ ದೋಷದ ಬೆನ್ನಲ್ಲಿಯೆ ಸಂಧಿಸುವ ದಂಡದಂತೆ ಅವಳ ಬೆನ್ನಹಿಂದೆ ಸಾವಧಾನವಾಗಿ ಹೊರಟಿದ್ದಾನೆ.

[ ರಾತ್ರಿಯಲ್ಲಿ ಕಳ್ಳಹೆಜ್ಜೆಯಿಂದ ನಡೆಯುವಾಗಿನ ವಿಶಿಷ್ಟ ಸಂಗೀತವಾದ್ಯ ಹಿಮ್ಮೇಳ ಉಪಯೋಗಿಸಬೇಕು. ]

**ಯಶೋಧರ**— ( ಒಳಗಿನ ಧ್ವನಿಯಲ್ಲಿ ) ಯಾವ ಜಾರನಲ್ಲಿಗೆ ಹೊರಟಿರುವಳೊ ? ಇಷ್ಟು ದಿನಗಳ ವರೆಗಿನ ನನ್ನ ಸಂಶಯವು ಈ ದಿನ ಸತ್ಯವನ್ನು ಕಾಣಬಹುದು !........ಓ.........ಗಜಶಾಲೆ ! ಆನೆಯ ಹತ್ತಿರ ಹೊರಳಿದಳು ! ಅಲ್ಲಿ ಯಾರು ??? ಯಾರೊ ಕಾದು ನಿಂತಿರುವರಲ್ಲ? ಬೇಡ, ಹೀಗೆ ನಾನು ಅವಳ ಬೆನ್ನಹಿಂದೆಯೆ ಹೋದರೆ ನಿಜ ಸಂಗತಿ ತಿಳಿಯದಿರಬಹುದು ಇಲ್ಲಿಯೆ ಕಂಬದ ಮರೆಯಲ್ಲಿ ನಿಂತು ನೋಡೋಣ

**ಅಮೃತಮತಿ**— ಹೃದಯೇಶ್ವರಾ, ಇಂದು ಈ ರೀತಿಯ ಮೌನವೇಕೆ ? ಕೋಪ ಬಂದಿದೆಯೆ ? ನೀನು ಈ ದಿನ ಹಾಡದೇ ಇದ್ದರೆ ನಾನು ಬದುಕುವದಾದರೂ ಎಂತು ? ನನ್ನ ಹೃದಯ ಆಕಾಶ, ನಟ್ಟಿರುಳಿನ ಆಕಾಶ, ಅಲ್ಲಿ ಚಂದ್ರನು ಪ್ರತ್ಯಕ್ಷನಾಗದಿದ್ದರೆ ಈ ಮುಗಿಲು ಬರಿ ಬಯಲು, ಬರಿ ಬರಡು. ಪ್ರಸನ್ನನಾಗು ಹೃದಯಚಂದ್ರಮಾ, ಇಕೊ ಈ ತಾಂಬೂಲವನ್ನು, ಈ ಹೂವಿನ ಮಾಲೆಯನ್ನು, ಈ ಸುಗಂಧದ ಚಂದನವನ್ನು ಸ್ವೀಕರಿಸು.

**ಅಷ್ಟವಂಕ**— ( ಸಿಟ್ಟಿನಿಂದ ) ನಿನ್ನ ತಾಂಬೂಲ ಬೇಡ. ನಿನ್ನ ಚಂದನ ಬೇಡ. ದೂರವಾಗು ನನ್ನಿಂದ; ನಡೆ.

[ ತಾಟನ್ನು ಕಸಿದು ಒಗೆಯುತ್ತಾನೆ. ಅದರ ಸಪ್ಪಳ ]

**ಯಶೋಧರ**— ( ಒಳದನಿಯಲ್ಲಿ ) ಚಾಂಡಾಲಾ ! ಅಯ್ಯೋ, ಹೆರಳನ್ನು ಹಿಡಿದು ಜಗ್ಗುತ್ತಿರುವನಲ್ಲಾ! ಅಯ್ಯೋ, ಕಾಲಿನಿಂದ ಒದೆಯುತ್ತಿದ್ದಾನೆ! ಈಗಳೆ ಅವನನ್ನು ಹಿಡಿಯಲಿ ? ಆದರೆ ಇವಳ ಸ್ವಭಾವವಾದರೂ ಹೇಗಿದೆಯೊ !........ಯಾರ ಸಹಾಯವನ್ನೂ ಕೋರುವದಿಲ್ಲ !

**ಅಮೃತಮತಿ** — ( ದುಃಖಿಸುತ್ತ ) ಕ್ಷಮಿಸಬೇಕು, ಹೃದಯಚಂದ್ರಮಾ. ರಾಜನು ಬೇಗನೆ ನಿದ್ದೆಹೋಗದಿದ್ದುದರಿಂದ ಹೀಗೆ ತಡೆದು ಬರಬೇಕಾಯಿತು.

**ಅಷ್ಟವಂಕ**— ಸಾಕುಮಾಡು........ನಿನಗೆ ರಾಜನೇ ಬೇಕಾಗಿದ್ದರೆ, ಅರಮನೆಯಲ್ಲಿ ವಿರಾಜಮಾನಳಾಗಿ ಇರಹೋಗು.

**ಯಶೋಧರ**— ( ಒಳದನಿಯಲ್ಲಿ ) ಅಧಮಾ ! ನೀಚ !

**ಅಮೃತಮತಿ**— ಈ ದಿನವೊಂದು ಮನ್ನಿಸಬೇಕು. ನೀನುಳಿದರೆ ನಾಯಿಯವಳು ನಾನು. ಮಿಕ್ಕ ಗಂಡರು ನನಗೆ ಸಹೋದರರು !

**ಯಶೋಧರ**— ( ಸಿಟ್ಟಿನಿಂದ ಖಡ್ಗವನ್ನು ತೆರೆದು ಒಳದನಿಯಲ್ಲಿ ) ಇಬ್ಬರನ್ನೂ ಸೀಳಿಹಾಕಿಬಿಡಲೆ ? ಈ ರೀತಿಯಾಗಿ ಕ್ರೂರತನದಿಂದ ಒಂದಾಗಬಯಸುವವರು, ಈ ನನ್ನ ಕೂರಸಿಯಿಂದುಂಟಾದ ನೆತ್ತರದಲ್ಲಿಯೆ ಹೊರಳಾಡಿ ಒಂದಾಗಲಿ... ....ಖಡ್ಗವೆ ನನ್ನದ್ಧವಾಗು.

[ ಒಮ್ಮೆಲೆ ಒಂದು ರೀತಿಯ ಸಪ್ಪಳ ]

ಏನದು ? ಯಾರು ಕಾಣುತ್ತಿರುವರು ? ಯಾವ ಅಶರೀರ ವಾಣಿ !

**ಒಂದು ಧ್ವನಿ**— ಅಹಿಂಸಾ ಪರಮೋ ಧರ್ಮಃ ! ನೀನು ಹಿಂಸೆ ಮಾಡುವಿಯಾ ಯಶೋಧರ ? ಇದು ಯೋಗ್ಯವೆ ?

**ಯಶೋಧರ**— ( ಒಳದನಿಯಲ್ಲಿ ) ಎಂಥ ಅಪೂರ್ವವಾದ ಧ್ವನಿ !

**ಧ್ವನಿ**— ಅಹಿಂಸಾ ಪರಮೋ ಧರ್ಮಃ !

**ಯಶೋಧರ**— ಅಹಿಂಸೆ! ಹಿಂಸೆಯ ಕೃತ್ಯವನ್ನು ಮಾಡುವದೆಂತು? ಬೇಡ........

[ ಖಡ್ಗವನ್ನು ಒಳಗೆ ಹಾಕುತ್ತಾನೆ. ಅದರ ಸಪ್ಪಳ. ]

ಮಾವುತನ ಪಟ್ಟದಾನೆಯಂತೆ ಇವರೀರ್ವರ ಪ್ರೇಮ ಹಬ್ಬಿಬಿಟ್ಟಿದೆ. ಅವರವರ ಪಾಪ ಅವರಿಗೇ ಇರಲಿ ಜಿನೇಶ್ವರ, ನೀನೆ ನನ್ನನ್ನು ಉದ್ಧರಿಸು. ನನ್ನ ಮನವನ್ನು ನಿರ್ಮಲಗೊಳಿಸು.

**ನಿವೇದಕ**— ಭಾರವಾದ ಮನಸ್ಸಿನಿಂದ ಯಶೋಧರ ಆ ಸ್ಥಳದಿಂದ ದೂರವಾದನು!

**ಅಷ್ಟವಂಕ**— ಇದೊಂದು ಸಲ ನಿನ್ನನ್ನು ಕ್ಷಮಿಸಿದ್ದೇನೆ.

**ಅಮೃತಮತಿ**— (ಆನಂದದಿಂದ) ಆಹಾ! ನನ್ನ ಪ್ರಿಯವಲ್ಲಭನ ಮನಸ್ಸು ಎಷ್ಟು ವಿಶಾಲವಾದುದು! ಈ ಹೂವನ್ನು ಸ್ವೀಕರಿಸು, ನನಗೆ ಅತ್ಯಂತ ರುಚಿಸುವ ಆ ಅಮೃತದೂಟ........

**ಅಷ್ಟವಂಕ**— ಅಮೃತದೂಟವೆ! ಆಗಲಿ........!

[ ಅಷ್ಟವಂಕನ ಸ್ವರ್ಗೀಯ ಗಾಯನ ]

**ನಿವೇದಕ**— ಹುಳಿ ಮುಟ್ಟಿದ ಹಾಲಿನಂತೆ, ನೀರು ಮುಟ್ಟಿದ ಜೇನೆಯ್ಯಿದಂತೆ, ಅಮೃತಮತಿ ಮತ್ತೆ ತನ್ನ ಪತಿಯ ಕಡೆ ತೆರಳಿದಳು.

## ದೃಶ್ಯ ೫

[ ಬೆಳಗಿನ ಮಂಗಳವಾದ್ಯಗಳು ]

**ನಿವೇದಕ**— ಯಶೋಧರನ ತಾಯಿಯಾದ ಚಂದ್ರಮತಿಯ ಅರಮನೆಯ ಹೊರ ಅಂಗಳ; ನೆಮ್ಮದಿಯಿಲ್ಲದೇ ಯಶೋಧರ ಆ ಅಂಗಳದಲ್ಲಿ ಶತಪಥವಿಡುತ್ತಿದ್ದಾನೆ.

**ಯಶೋಧರ**— ಅಮೃತಮತಿ!!!........ಅವಳು ನನಗೆ ಅಮೃತಮತಿಯಲ್ಲ ವಿಷಮತಿ. ನನ್ನ ಬಾಳಬಟ್ಟಲದಲ್ಲಿ ವಿಷವನ್ನು ಬೆರೆಯಿಸಿದವಳು! ಮೈಯೆರಡು ಉಸಿರೊಂದು ಎಂದು ಬಗೆದು ಅವಳ ಸಂಗಡ ಕೂಡಿ

ಕೊಂಡು ನಲಿದಿದ್ದೆ. ಆದರೆ ನನ್ನದು ಎಂತಹ ದೈವ! ಜೇವನ್ನು ಮೆಚ್ಚಿದ ಕಾಗೆಗೆ ಮಾವು ಇಳಿದಾದಂತೆ ಕಾಣುವುದು. ಅಮೃತಮತಿಯ ದೃಷ್ಟಿಯಲ್ಲಿ ನಾನು ಹೀಗೆಯೆ ಕಂಡಿರುವೆನೆ! ಚಿಃ........ನಿನ್ನೆಯೆ ಅವ ಳನ್ನು ನರಕದಲ್ಲಿ ನೂಕಿಬಿಡುತ್ತಿದ್ದೆ. ಆದರೆ........ನನ್ನಲ್ಲಿ ಒಲವಿಂಗಿ ಜೇರೆಡೆಗೆ ಒಲವುಂಡು ಅಡ್ಡದಾರಿ ಹಿಡಿದ ಹೆಣ್ಣನ್ನು ಕೊಂದರೆ ತಾನೆ ಏನು ಬಂದೀತು! ಕೊರಳಿಗೆ ಕೊಲೆ ಕಟ್ಟಿತೇ ಹೊರತು, ಒಲವನ್ನು ತಿದ್ದಿದಂತಾಯಿತೆ? ಒಲ್ಲದ ನಲ್ಲಳ ಒಲವನ್ನು ನನ್ನೆಡೆಗೆ ಮರಳಿಸಿ ದಂತಾಯಿತೆ? ಮಡದಿಯ ಮನದ ಒಲುಮೆಗೆ ಒಡೆತನ ಕಳೆದುಕೊಂಡ ವನು ಆವಳ ಒಡೆತನ ಸಾಧಿಸಿ ಫಲವೇನು? ಜಗತ್ತಿನಲ್ಲಿ ಎಲ್ಲವನ್ನೂ ನಂಬಬಹುದು. ಆದರೆ ಒಂದು ಹೆಣ್ಣನ್ನು ಮಾತ್ರ ನಂಬುವುದು ಬಹು

**ಚಂದ್ರಮತಿ**— ಇದೇನು ಯಶೋಧರಾ, ಬೆಳಗಿನಲ್ಲಿದ್ದು ಯಾವ ಚಿಂತೆ ಯಿಂದ ಓಡಾಡುತ್ತಿರುವಿ?

**ಯಶೋಧರ**— ತಾಯಿ ಚಂದ್ರಮತಿ, ನನಗೆ ಯಾವ ಚಿಂತೆ! ನನ್ನನ್ನು ನೀನು ಎಲ್ಲ ರೀತಿಯಿಂದಲೂ ನೋಡಿಕೊಳ್ಳುತ್ತಿರಲು ನನಗೆ ಯಾವ ಚಿಂತೆ!

**ಚಂದ್ರಮತಿ**— ಮಗು, ಏನಾದರೂ ಸುಳ್ಳು ಹೇಳಬೇಡ ನಿನ್ನ ಕಣ್ಣುಗಳಲ್ಲಿ ತೇಜವಿಲ್ಲ. ಮುಖದಲ್ಲಿ ಕಳೆಯಿಲ್ಲ. ನಿನ್ನ ಕರಿ ಕುರುಳುಗಳು ಹರಡಿ ನಿಂತಿವೆ. ಹೊರಗಿನ ಮುಖ ಒಳಗಿನ ಭಾವವನ್ನು ವ್ಯಕ್ತಪಡಿಸುವು ದಿಲ್ಲವೆ? ಏನಾಗಿದೆ ಹೇಳು, ಯಶೋಧರ.

**ಯಶೋಧರ**— ಏನು ಹೇಳಲಿ ತಾಯಿ?

**ಚಂದ್ರಮತಿ**— ಹೇಳಬೇಕಾದುದನ್ನೆಲ್ಲ ಹೇಳಿಬಿಡು. ಅಂದರೆ ನಿನ್ನ ಮನ ಸ್ಸಿಗೆ ನೆಮ್ಮದಿಯಾದೀತು.

**ಯಶೋಧರ**— ನಿನ್ನೆ ರಾತ್ರಿ........

**ಚಂದ್ರಮತಿ**— ಏನು, ನಿನ್ನೆ ರಾತ್ರಿಯಲ್ಲಿ ನಿದ್ದೆಯಿಲ್ಲವೆ? ದೇಹದಲ್ಲಿ ಅನಾ ರೋಗ್ಯವೆ?

**ಯಶೋಧರ**— ಇಲ್ಲ ತಾಯಿ, ನಿನ್ನೆ ರಾತ್ರಿಯದು ಅದೊಂದು ವಿಷಬೀಜ.

**ಚಂದ್ರಮತಿ**— ಏನು, ವಿಷಬೀಜವೆಂದು ಹೇಳುವೆ; ಸ್ಪಷ್ಟವಾಗಿ ಹೇಳು.

**ಯಶೋಧರ**— (ಸ್ವಗತ) ಸತ್ಯ ಸಂಗತಿ ಹೇಳಬೇಕೆ? ನನ್ನ ಮಡದಿಯ ಮಾನ ಕಾಯಬೇಕೆ! ಈ ಸುದ್ದಿಯಿಂದ ಅರಮನೆಯಲ್ಲಿ ಎಂಥ ಹಾಹಾ ಕಾರವೆದ್ದೀತು! ಈವರೆಗೆ ನಾನು ಮನಸ್ಸನ್ನು ಧೃತಿಗೊಳಿಸಿದ್ದೇನೆ. ಇನ್ನು ಮುಂದೂ ಹಾಗೆಯೇ ಉಳಿದರೆ ಒಳಿತಲ್ಲವೆ?........ತಾಯಿಗೆ ಏನೆಂದು ಹೇಳಲಿ? ಹೀಗೆ ಮಾಡುವೆ........(ಪ್ರಕಟವಾಗಿ) ತಾಯಿ, ನಿನ್ನೆ ರಾತ್ರಿ ಒಂದು ಕೆಟ್ಟ ಕನಸನ್ನು ಕಂಡೆ. ಅದೇ ವಿಷಬೀಜದ ಸಂಗತಿ

**ಚಂದ್ರಮತಿ**— ಯಶೋಧರ, ಅದಕ್ಕೆ ನಿನ್ನ ಮುಖ ನೀರೊಡೆದಿದೆ. ಹೇಳು, ಆ ಕನಸು ಯಾವುದು?

**ಯಶೋಧರ**— ವೃಂದಾವನದ ಸರೋವರದಲ್ಲಿ ವಿಹರಿಸುವ ಅಂಚೆಯು ಕಸಲಿ ಅವಲುಗೊಳದಲ್ಲಿ ನಲಿದದ್ದನ್ನು ಕಂಡೆ ರಾತ್ರಿಯೆಲ್ಲ ಇದೇ ಕನಸು ಇದ್ದಿತು.

**ಚಂದ್ರಮತಿ**— ಮಗು, ಇದು ಯಾವದೋ ಕೆಡಕಿನ ಸೂಚನೆಯಾಗಿದೆ. ಕೆಂಪು ಕಮಲಗಳ ಸರೋವರದಲ್ಲಿರುವ ಹಂಸಪಕ್ಷಿ ಹೊಲಸು ಸರೋವರದಲ್ಲಿ ಆನಂದಪಡಬೇಕಾದರೆ........

**ಯಶೋಧರ**— ಅಹುದು ತಾಯಿ, ಈ ಕೆಟ್ಟ ಕನಸಿನಿಂದ ನಿನ್ನೆ ರಾತ್ರಿಯೆಲ್ಲ ನನಗೆ ನಿದ್ದೆಯೆ ಇಲ್ಲ.

**ಚಂದ್ರಮತಿ**— ಯಶೋಧರ, ಕನಸಿಗೂ ನಮ್ಮ ಜೀವನಕ್ಕೂ ವಿಶೇಷ ಸಂಬಂಧವಿರುವುದು. ಈ ಕೆಟ್ಟ ಕನಸಿನ ದುರ್ಘಟನೆ ತಪ್ಪಿಸಬೇಕಾದರೆ ನಾವು ಏನಾದರೂ ಮಾಡಬೇಕು.

**ಯಶೋಧರ**— ಏನು ಮಾಡಬೇಕು ತಾಯಿ, ಹೇಳು. ನೀನು ಹೇಳಿದ್ದನ್ನು ಮಾಡಿಸುವೆ.

**ಚಂದ್ರಮತಿ**— ಒಂದು ಕುರಿಯನ್ನಾಗಲೀ ಅಥವಾ ಬೇರೆ ಏನಾದರನ್ನಾಗಲೀ ಬಲಿ ಕೊಡಬೇಕೆಂದು ಅನ್ನಿಸುತ್ತದೆ.

**ಯಶೋಧರ**— ಬಲಿ !!

**ಚಂದ್ರಮತಿ**— ಅಹುದು, ಬಲಿ ಕೊಡಬೇಕು. ಕನಸಿನ ಅರ್ಥ ಅದೇ ಆಗಿದೆ. ಬಲಿ ಕೊಡಲೇಬೇಕು.

**ಯಶೋಧರ**— ಬಲಿ ! ಈ ಮಾತುಗಳನ್ನು ಯಾವ ಕಿವಿಗಳಿಂದ ಕೇಳಲಿ; ತಾಯಿ ?

**ಚಂದ್ರಮತಿ**— ಇಷ್ಟೇಕೆ ಬೆದರುವೆ ಮಗು. ಬಲಿ ಕೊಡದೆ ಹೋದರೆ ನಮಗೆ ಅನಿಷ್ಟವಾಗುವದು ನಿಶ್ಚಿತ.

**ಯಶೋಧರ**— ತಾಯಿ, ಜೀವದಯೆ ಜೈನ ಧರ್ಮವಲ್ಲವೆ ? ಮಾನವನಿಗೆ ಈ ವಧೆಯು ಎಂದಿಗೂ ಹಿತವನ್ನುಂಟುಮಾಡದು. ನೀನು ಹೇಳಿವ ಕಾರ್ಯವನ್ನು ಮಾಡಿದರೆ ನನ್ನ ಕೇಡುಗಯುತಿ ಸಮೀಪಿಸಿತೆಂದೇ ತಿಳಿಯಬೇಕು.

**ಚಂದ್ರಮತಿ**— ನಿನಗಿಂತಲೂ ಪ್ರಿಯಳಾದ ನನಗೆ ಧರ್ಮದ ಅರ್ಥ ಗೊತ್ತಿಲ್ಲವೇ ? ದೇವರ ಪ್ರೀತ್ಯರ್ಥವಾಗಿ ಬಲಿಯನ್ನೆ ಕೊಡಲೇಬೇಕು. ರಾಷ್ಟ್ರದ ಸಂರಕ್ಷಣೆಗಾಗಿ ವೈರಿಗಳನ್ನು ಕೊಲ್ಲುವುದಿಲ್ಲವೇ ? ಮಾನವನು ಮೊದಲು ರೂಢಿಯಲ್ಲಿ ಉತ್ತಮನಾಗಬೇಕು.

**ಯಶೋಧರ**— ಆದರೂ ತಾಯಿ, ನನಗೆ ಜೀವಂತ ಪ್ರಾಣಿಗಳನ್ನು ಕೊಲ್ಲಲು ಮನಸ್ಸಾಗುವದಿಲ್ಲ. ಇರುಳ ಕಂಡ ಬಾವಿಗೆ ಹಗಲು ಬೀಳಬೇಕೆ ? ತಿಳಿದೂ ತಿಳಿದೂ ಕತ್ತಲೆಯನ್ನು ಅಪ್ಪಿಕೊಳ್ಳಬೇಕೆ ?

**ಚಂದ್ರಮತಿ**— ಯಶೋಧರ, ನಿನ್ನಲ್ಲಿ ಭಕ್ತಿ ಇದ್ದರೆ ನಿರ್ಭಯದಿಂದ ಈ ಕಾರ್ಯವನ್ನು ಮಾಡು. ಇಲ್ಲದೆ ಇದ್ದರೆ, ನಾನೇ ನನ್ನ ಜೀವನ ಬಲಿ ಕೊಡುವೆ.

**ಯಶೋಧರ**— ಆಗಲಿ ತಾಯಿ, ನಿನ್ನ ಸಲುವಾಗಿ ನಾನು ಈ ಕಾರ್ಯ ಮಾಡುವೆ. ಆದರೆ ಪ್ರತ್ಯಕ್ಷ ಪ್ರಾಣಿಗಳನ್ನು ಬಲಿ ಕೊಡುವುದಕ್ಕಿಂತ ಬೇರೊಂದು ಯುಕ್ತರೀತಿಯಿಂದ ಬಲಿ ಕೊಡಬಹುದಲ್ಲವೆ ?

**ಚಂದ್ರಮತಿ**— ಆಗಲಿ ಯಶೋಧರ, ನಿನ್ನ ಸಲುವಾಗಿ ಹಾಗೆ ನಾನು ಒಪ್ಪಿಕೊಳ್ಳುವೆ. ಒಂದು ಹಿಟ್ಟಿನ ಕೋಳಿಯನ್ನು ಬಲಿ ಕೋಡೋಣ, ಮಗು;

ಚಿಂತಿಸಬೇಡ. ಬಲಿ ಕೊಟ್ಟ ತರುವಾಯ ಎಲ್ಲ ದುಃಖಗಳೂ ದೂರಾಗುವವು. ಶಾಂತವಾಗು, ನಡೆ, ನಿನ್ನ ನಿತ್ಯ ಕರ್ಮ ಮುಗಿಸು.

**ಯಶೋಧರ**—( ಸ್ವಗತ ) ಶಾಂತ ಮನಸ್ಸು........! ಛೀ, ಏನು ಹೇಳಲು ಹೋಗಿ ಏನಾಯಿತಲ್ಲ ! ಮಡದಿಯ ಮಾನ ಕಾಯಲು ಹೋಗಿ ನಾನೆ ಪಾಪದ ಕೂಪದಲ್ಲಿ ಬಿದ್ದೆನಲ್ಲಾ ! ಮನಸ್ಸು ಹೇಗೆ ಶಾಂತವಿರಬೇಕು !

## ದೃಶ್ಯ ೬

[ ಆನಂದ ಕೊಡುವ ಸಮೀಪದ ಹಿಮ್ಮೇಳ ]

**ನಿವೇದಕ**— ಮಾರ್ನೋಮಿಯ ಮುಂದಿನ ಭೌಮಾಷ್ಟಮಿಯ ದಿನ! ತಾಯಿಗೆ ಕೊಟ್ಟ ವಚನದಂತೆ ಯಶೋಧರನು ಹಿಟ್ಟಿನ ಕೋಳಿಯನ್ನು ಬಲಿಕೊಡುವ ದಿನ !

[ ಜನರ ಗದ್ದಲ ! ಯಜ್ಞದಲ್ಲಿಯ ಸ್ವಾಹಾಧ್ವನಿ ]

**ಅಮೃತಮತಿ**— ದೇವಾ, ಅತ್ತೆಯವರ ಹೇಳಿಕೆಯಂತೆ ಕೋಳಿಯನ್ನು ಬಲಿ ಕೊಡುವ ದಿನ ಆಚರಿಸಿದುದು ಒಳ್ಳೆಯದೆ ಆಯಿತು. ಇಲ್ಲವಾದರೆ ನಮ್ಮ ವಂಶಕ್ಕೆ ಯಾವ ಅನಿಷ್ಟವು ಇದ್ದಿತೋ ಏನೋ.

**ಯಶೋಧರ**— ನೀನಾಡಿದುದು ನಿಜ. ನೀನು ನನ್ನ ಸಂಗಡ ಈ ಕಾರ್ಯದಲ್ಲಿ ಸಮಭಾಗಿಯಾಗಿ ಬಂದುದು ನನ್ನ ಯಶಸ್ಸು ಎಂದು ತಿಳಿಯಬೇಕು.

**ಅಮೃತಮತಿ**— ಹೀಗೇಕೆ ನುಡಿಯುವಿರಿ ? ನಿಮ್ಮ ಹಿಂದಿನ ನೆರಳು ನಾನು.

**ಯಶೋಧರ**— ಮಾತು ಬಹಳ ಸರಿಯಾಗಿದೆ ! ಆದರೆ ನನ್ನ ಪ್ರತಿಯೊಂದು ಕಾರ್ಯವೂ ನಿನ್ನ ಮನಸ್ಸಿಗೆ ಬರುತ್ತದೆಂದು ಹೇಗೆ ತಿಳಿಯಬೇಕು ?

**ಅಮೃತಮತಿ**—ನನ್ನ ಜೀವನವನ್ನೇ ನಿನಗೆ ಮುಡಿಪಾಗಿಟ್ಟಿದ್ದೇನೆ. ನನ್ನಿಂದ ಯಾವದೇ ಕಾರ್ಯವನ್ನು ಮಾಡಿಸಿಕೊಳ್ಳಬಹುದು. ನಿಮ್ಮ ಸೇವೆಯನ್ನು ಮಾಡದೇ ನಾನು ಹೇಗೆ ಕೃತಾರ್ಥಳು ?

**ಯಶೋಧರ**— (ಆಣಕಿಸಿಂದ) ನೀನು ಹೇಳಿದುದೆಲ್ಲ ನನಗೆ ಗೊತ್ತಿದೆ ನೀನು ಹೀಗಿರುವೆಯೆಂದೇ ಇದು ನನ್ನ ಸುದೈವವೆಂದು ಹೇಳಬೇಕು, ಅಲ್ಲವೆ ? ಇಂದಿನ ಕರ್ಮವು ಸುದೈವವನ್ನು ಬಯಸಿಯೆ ಅಲ್ಲವೆ ?

**ಚಂದ್ರಮತಿ**— ( ಪ್ರವೇಶಿಸಿ) ಅಮೃತಮತಿ.

**ಅಮೃತಮತಿ**— ಅತ್ತೆಯವರಿಗೆ ನಮಸ್ಕರಿಸುವೆ. ಮೈತ್ರೇಯಿ, ನಮಸ್ಕರಿಸು.

**ಚಂದ್ರಮತಿ**—ಏಳಿರಿ. ಯಶೋಧರ, ಎಲ್ಲರೂ ನಡೆಯಿರಿ. ಹಿಟ್ಟಿನ ಕೋಳಿಯ ಪ್ರದಕ್ಷಿಣೆ ಮುಗಿಯುತ್ತ ಬಂದಿದೆ. ದೇವಿಯ ಸಮೀಪದಲ್ಲಿಯೆ ಕುಳಿತು ಕೊಳ್ಳೋಣ.

**ಮೈತ್ರೇಯಿ**— ಅಷ್ಟು ಸುಂದರವಾದ ಎತ್ತರವಾದ ಕೋಳಿಯನ್ನು ಹಿಟ್ಟಿನಲ್ಲಿ ಯಾರು ನಿರ್ಮಿಸಿದ್ದಾರೆ ?

**ಯಶೋಧರ**— ( ಒಮ್ಮೆಲೆ) ಅಷ್ಟವಂಕ.

**ಚಂದ್ರಮತಿ**— ಮಗು, ಅವನೇನು ತಯಾರಿಸುವ ? ಅವನು ಪಟ್ಟದಾನೆಯ ಮಾವುತ.

**ಅಮೃತಮತಿ**— ( ಮೈತ್ರೇಯಿಯ ಕಿವಿಯಲ್ಲಿ ) ಇದೇನು ? ಮೈತ್ರೇಯಿ, ನಮ್ಮ ಗುಟ್ಟು........?

**ಮೈತ್ರೇಯಿ**— ಬೆದರಬೇಡಿರಿ, ನಾನೂ ಇದ್ದೇನೆ. ( ಪ್ರಕಟವಾಗಿ) ಆ ಮಾವುತ ಬಹಳ ಸುಶ್ರಾವ್ಯವಾಗಿ ಹಾಡುತ್ತಾನೆ

**ಚಂದ್ರಮತಿ**— ಆ ಹಾಡನ್ನು ತೆಗೆದುಕೊಂಡು ನಾವೇನು ಮಾಡಬೇಕು? ಕೋಳಿಯನ್ನು ಪೂಜಾರಿಗಳೇ ತಯಾರಿಸುವರು.

**ಅಮೃತಮತಿ**— ಅಹುದು, ಅಹುದು. ಅತ್ತೆಯುವರು ಹೇಳಿದುದು ನಿಜ.

**ಚಂದ್ರಮತಿ**— ಯಶೋಧರಾ, ಹೀಗೇಕೆ ಕೆಳಮೊಗ ಮಾಡುವೆ ? ನಿರ್ಮಲ ವಾದ ಮನಸ್ಸಿನಿಂದ ನೀನು ಚಂಡಿಗೆ ಬಲಿ ಕೊಡದಿದ್ದರೆ ಅವಳು ಸಂತೃಪ್ತಿಯಾಗಳು ! ಚೇತರಿಸು.

**ಯಶೋಧರ**— ಯಾವ ಚಿಂತೆಯೂ ಇಲ್ಲ. ನನ್ನ ಶುದ್ಧವಾದ ಮನಸ್ಸಿ ನಿಂದಲೆ ಬಲಿಗೊಡುತ್ತಿದ್ದೇನೆ.

**ಚಂದ್ರಮತಿ**— ಯಶೋಧರಾ, ಅಮೃತಮತಿ, ಈ ಕೋಳಿಗೆ ಕುಂಕುಮ ಭಂಡಾರ ಏರಿಸಿರಿ.

**ನಿವೇದಕ**— ರಾಜರಾಣಿಯುವರು ಭಾಂಡಾರವೇರಿಸಿದರು. ಪೂಜಾರಿಗಳು ಅದನ್ನು ಪ್ರಜ್ವಲಿಸುವ ಅಗ್ನಿಯಲ್ಲಿ ಅರ್ಪಿಸಿದರು. ಅಗೋ ಅದು ಏನು ?

[ ಭಯಂಕರ ಸಂಯಙ್ ಎನ್ನುವ ನಪ್ಪಳ ]

**ಯಶೋಧರ**— (ಗಾಬರಿಯಿಂದ) ಅಗೋ ಅಗ್ನಿಯಲ್ಲಿ ಅದು ಏನು ? ಬೆಂತರ! ಯಾವದೋ ಬೆಂತರ.

**ಬೆಂತರ**— ಕು ಕ್ಕ ಕ್ಕೋಽಽ... ...ಕು ಕ್ಕು ಕ್ಕೊ...........

**ಯಶೋಧರ**— ಏನದು ? ಹಿಟ್ಟಿನ ಕೋಳಿಯಲ್ಲಿ ಅಡಗಿಕೊಂಡಿರುವ ಯಾವದೋ ಬೆಂತರ !

[ ಜನರ ಹಾಹಾಕಾರ ಗದ್ದಲ ]

**ಚಂದ್ರಮತಿ**— ಓಹೋ, ಮಾಯವಾಗಿಬಿಟ್ಟಿತು ! ಏನಿದು ಅದ್ಭುತ !

**ಅಮೃತಮತಿ**— ಎಷ್ಟು ಭಯಂಕರವಾದ ದೃಶ್ಯವಿದು ! ಆ ನೋಟ ಇನ್ನೂ ಕಣ್ಣು ಕುಕ್ಕಿಸುತ್ತಿದೆ.

**ಯಶೋಧರ**— ಅಯ್ಯೋ, ನನ್ನ ಕರುಳಿನಲ್ಲಿ ಕೊರೆಯುತ್ತಿದೆ! ಎಂಥ ಭೀಕರ ಕೃತ್ಯವನ್ನು ಎಸಗಿದೆನಲ್ಲಾ ! ಅಯ್ಯೋಽ..........

**ಚಂದ್ರಮತಿ**— ಇದೇನು ಮಗು ? ಹೀಗೇಕೆ ಜೋಲು ಹೊಡೆದುಬೀಳುವೆ ? ಮಗು ಯಶೋಧರಾ, ಮಾತನಾಡು............

**ಅಮೃತಮತಿ**— ಮೈತ್ರೇಯಿ, ಎಲ್ಲರನ್ನೂ ಹೊರಗೆ ಕಳಿಸು. ನಡೆಯಿರಿ, ಇಲ್ಲಿ ಗದ್ದಲ ಮಾಡಬೇಡಿರಿ.

[ ನಡೆಯಿರಿ, ನಡೆಯಿರಿ ಕೂಗು ]

**ಚಂದ್ರಮತಿ**— ಅಮೃತಮತಿ, ಇಲ್ಲಿ ಗಾಳಿಯನ್ನು ಹಾಕು...........ಮಗು ಯಶೋಧರಾ.

**ಯಶೋಧರ**— (ಸಾವಧಾನವಾಗಿ) ಯಾರು ?........ಇಲ್ಲಿ ಏಕೆ ನಿಂತಿರುವೆ ?

**ಚಂದ್ರಮತಿ**— ಅಮೃತಮತಿ, ನಿನ್ನ ಜೊಟ್ಟುಮಾಡಿ ಕೇಳುತ್ತಿದ್ದಾನೆ! ಇದೇನು ವಿಚಿತ್ರ!

**ಯಶೋಧರ**— ಯಾರು ?? ಏಕೆ ನಿಂತಿರುವೆ ?

**ಚಂದ್ರಮತಿ**— ನನ್ನ ಮಗುವಿಗೆ ಏನಾಯಿತು ? ಅಮೃತಮತಿ, ನೀನೆ ಮರೆಯಾಗಿಬಿಡು, ಕೊಂಚ ದೂರವಾಗು.

**ಅಮೃತಮತಿ**— ಹಾಗೆಯೆ ಆಗಲಿ ಅತ್ತೆಯವರೆ, ನಡೆ ಮೈತ್ರೀಯಿ.

**ಯಶೋಧರ**— ಯಾರು ???

**ಧ್ವನಿ**— ನಾನು ಬೆಂತರನಲ್ಲ. ಆತ್ಮಸಾಕ್ಷಿ!

**ಯಶೋಧರ**— ಆತ್ಮಸಾಕ್ಷಿ !!

**ಧ್ವನಿ**— ಅಹುದು! ಅಹಿಂಸಾ ಪರಮೋ ಧರ್ಮಃ! ಸಕಲ ವಸ್ತುಗಳಲ್ಲಿಯೂ ಜೀವನಿದೆ ನೋಡು! ಇದು ನಿನಗೆ ತಿಳಿಯದು. ಪಾಪದ ಅಂಶವು ನಿನ್ನಲ್ಲಿ ಇನ್ನೂ ಇದೆ. ಪ್ರೇಮದ ವಂಚನೆಯಲ್ಲಿಯೂ ಮಾನವ ಸ್ತಿಮಿತವಾಗಿ ಬಾಳಬಹುದು! ಸಲವನ್ನು ಗೆಲ್ಲಬಹುದು. ಹಿಂಸೆಯನ್ನು ಮಾಡಿದರೆ ಹೇಗೆ? ಇದಕ್ಕೆ ಪ್ರಾಯಶ್ಚಿತ್ತವಾಗಬೇಕು.

**ಯಶೋಧರ**— (ಒಳಗಿನ ದನಿಯಲ್ಲಿ) ಪ್ರಾಯಶ್ಚಿತ್ತ!

**ಚಂದ್ರಮತಿ**— ಯಶೋಧರ, ಏಳು.

**ಯಶೋಧರ**— ಪ್ರಾಯಶ್ಚಿತ್ತ !!

**ಚಂದ್ರಮತಿ**— ಮಗು, ಏಳು, ನಿನಗೆ ಗುಣವಾದರೆ ಸಾಕು, ಪ್ರಾಯಶ್ಚಿತ್ತವನ್ನು ನಾನು ತೆಗೆದುಕೊಳ್ಳುವೆ.

**ಯಶೋಧರ**— ಪಶು! ನಾನು ಕ್ರೂರ ಪಶು !!....—ಅವಳು ನನಗಿಂತಲೂ ಪವಿತ್ರಳು! ನನ್ನಂತೆ ಯಾವ ಹಿಂಸೆಯನ್ನೂ ಮಾಡಲಿಲ್ಲವಲ್ಲ!........ ಛೀ ಇದೇನಾಯಿತು? ನಾನೊಂದು ಬಯಸಿದರೆ ದೈವವೊಂದು ಬಗೆಯಿತು!

**ಚಂದ್ರಮತಿ**— ಇದೇನು ಬಡಬಡಿಸುತ್ತಿರುವೆ? ಯಾರು ಅವರು?

**ಯಶೋಧರ**— ಆ ಪಾತಕಿಯ ಮಾಯ ವಿಷಬೀಜವಾಯಿತು! ಮಾತೆಯು ಮಾತು ನಮಗೆ ಬಲೆಯಾಯಿತು! ಹಿಂಸೆಯು ಅಮೋಘವಾದ ಬಾಣ ವಾಯಿತು. ನನ್ನ ಆತ್ಮಕುರಂಗವೇ ಬಿದ್ದುಹೋಗಿದೆ!

**ಚಂದ್ರಮತಿ**— ನಿನ್ನ ಒಡೆದುಹೋದ ಮನವು ನನಗೆ ತಿಳಿದಿದೆ. ನಾನೂ ಪಾಪದಿಂದ ಮುಕ್ತಳಾಗಬೇಕೆನ್ನುವೆ.

**ಯಶೋಧರ**— ನಾನು ತಪೋವನಕ್ಕೆ ಹೋಗುವೆ. ನನ್ನ ತಪಶ್ಚರ್ಯದಿಂದ ದೇಹವನ್ನು ಸವೆಸುವೆ. ಈ ದೇಹಕ್ಕೆ ಯಾರ ಪ್ರೀತಿಯೂ ಬೇಡ, ಇದೇ ಇದೇ ಪ್ರಾಯಶ್ಚಿತ್ತ!

**ಚಂದ್ರಮತಿ**— ಯಶೋಧರ, ನನ್ನಿಂದಲೆ ಇಷ್ಟೆಲ್ಲ ಸಂಭವಿಸಿತು. ನಾನೂ ನಿನ್ನ ಸಂಗಡ ಬರುತ್ತೇನೆ. ಮುಕ್ತಿಮಾರ್ಗವನ್ನು ಕಂಡುಕೊಳ್ಳುತ್ತೇನೆ.

**ಅಮೃತಮತಿ**— (ಪ್ರವೇಶಿಸಿ) ಏನದು ಅತ್ತೆಯವರೆ, ಯಾವ ಮಾರ್ಗವನ್ನು ಕಂಡುಕೊಳ್ಳುವುದು?

**ಚಂದ್ರಮತಿ**— ಮುಕ್ತಿಮಾರ್ಗ; ಬೇಗನೆ ಹೋಗಲು ನಿಶ್ಚಯಿಸಿದ್ದೇವೆ.

**ಅಮೃತಮತಿ**— ಇದು ನಿಜವೆ?

**ಯಶೋಧರ**— ಅಂತರ್ವಾಣಿಯು ನನಗೆ ಹಾಗೆ ಹೇಳುತ್ತದೆ.

**ಅಮೃತಮತಿ**— ಇದೇನು ಹೀಗೆ ಒಮ್ಮೆಲೆ ರಾಜ್ಯ ತೊರೆದುಹೋದರೆ? ಪ್ರಜೆಗಳ ಸುಖವನ್ನು ಯಾರು ನೋಡಿಕೊಳ್ಳಬೇಕು?

**ಚಂದ್ರಮತಿ**— ನಿನ್ನ ಮಗ ಯಶೋಮತಿ ಇದ್ದಾನೆ. ಅವನಿಗೆ ಪಟ್ಟಗಟ್ಟಬೇಕು. ನೀನೂ ಇರುವಿ.

**ಅಮೃತಮತಿ**— ನನ್ನ "ಪ್ರಿಯವಲ್ಲಭ"ನನ್ನು ತೊರೆದು ನಾನು ಹೇಗೆ ಇರಬೇಕು! ಹೂವಿನ ಸೌರಭ ನಾನು! ಪತಿಯ ಹಿಂದೆ ಬರುವೆ.

**ಯಶೋಧರ**— ನೀವು ಏನೆ ಮಾಡಬಹುದು. ನಾನು ಆದಷ್ಟು ಬೇಗನೆ ನಾಳೆಯ ದಿನವೆ ನನ್ನ ಮಾರ್ಗ ಹಿಡಿಯಬೇಕೆನ್ನುವೆ.

**ಅಮೃತಮತಿ**— ಹಾಗೆಯೆ ಆಗಲಿ. ಎಲ್ಲರೂ ಕೂಡಿಕೊಂಡು ಹೋಗೋಣ.

[ ಕೊಂಚ ಸಂಗೀತ ]

**ನಿವೇದಕ**— ಪ್ರಿಯತಮನಾದ ಅಷ್ಟವಂಕನನ್ನು ತೊರೆದು ಅಮೃತಮತಿ ಜೀವಿಸುವದಾದರೂ ಹೇಗೆ? ಉಜ್ಜಯಿನಿ ಪಟ್ಟಣವನ್ನು ಬಿಟ್ಟುಹೋಗಲು ಅವಳಿಗೆ ಮನವಿರಲಿಲ್ಲ. ಆ ಮಾಯಾಂಗನೆ ಬಹಳ ಧೂರ್ತಳು. ಒಮ್ಮೆಲೆ ಅವಳಿಗೆ ಒಂದು ಉಪಾಯವು ಹೊಳೆಯಿತು.

**ಅಮೃತಮತಿ**— ನಾವು ತಪೋವನಕ್ಕೆ ಹೊರಡುವ ಮೊದಲು ಒಂದು ಸುಖ ಭೋಜನ ಮಾಡೋಣ. ಒಮ್ಮೆ ಈ ರಾಜಧಾನಿಯನ್ನು ತೊರೆದ ಮೇಲೆ ಅಂಥ ಸವಿಯೂಟ ಮಾಡುವುದು ಸಾಧ್ಯವೆ? ಜಗತ್ತನ್ನು ಬಿಡುವ ಮುನ್ನ ಸೂರ್ಯನೂ ಸಹ ತನ್ನ ಹೊಂಬಣ್ಣದಿಂದ ನಲಿಯುತ್ತಾನೆ.

**ಚಂದ್ರಮತಿ**—ಹಾಗೆ ಮಾಡುವದರಲ್ಲಿ ಏನು ದೋಷವಿದೆ? ಮಾಡಬಹುದು.

**ಅಮೃತಮತಿ**— ನನ್ನ ಅರಮನೆಯಲ್ಲಿ ಎಲ್ಲ ವ್ಯವಸ್ಥೆ ಮಾಡಿಸುವೆ. ನೀವೆಲ್ಲ ಬರುವಿರಲ್ಲವೆ?

**ಚಂದ್ರಮತಿ**— ಯಶೋಧರ, ಏನು ಮಾಡೋಣ ಹೇಳಿಬಿಡು.

**ಯಶೋಧರ**— ಏನೆ ಮಾಡಿರಿ. ಆದಷ್ಟು ಬೇಗ ಹೊರಡಬೇಕು.

**ಅಮೃತಮತಿ**— ಹಾಗೆಯೆ ಆಗಲಿ. ನಾಳೆಯ ದಿನವೆ ಎಲ್ಲವನ್ನೂ ಮುಗಿಸೋಣ.

## ದೃಶ್ಯ ೭

[ ಸಂತೋಷದ ಸಂಗೀತ ]

**ನಿವೇದಕ**— ಅಮೃತಮತಿಯ ಅರಮನೆಯಲ್ಲಿ ಸವಿಯೂಟದ ಸಿದ್ಧತೆ ನಡೆದಿದೆ.

[ ಮತ್ತೆ ಸಂಗೀತ ]

**ಅಮೃತಮತಿ**—ಮೈತ್ರೇಯಿ, ಈ ಮುತ್ತುಗಳನ್ನು ಭಂಗಾರದ ಒಡವೆಗಳನ್ನು ತೆಗೆದುಕೊ.

**ಮೈತ್ರೇಯಿ**— ದೇವಿ, ಅಷ್ಟವಂಕ ಇಲ್ಲಿಗೇ ಬಂದಿದ್ದಾನೆ.

**ಅಮೃತಮತಿ**— ಬಹಳ ಗುಪ್ತವಾಗಿ....... ?

**ಮೈತ್ರೇಯಿ**— ಯಾರಿಗೂ ತಿಳಿಯದು.

**ಅಮೃತಮತಿ**— ಉಳಿದ ಜನ ಎಲ್ಲಿ ಇರುವರು ?

**ಮೈತ್ರೇಯಿ**— ಬೇರೆಯ ಕೋಣೆಯಲ್ಲಿ.

**ಅಮೃತಮತಿ**— ಅವರ ಊಟ ಎಲ್ಲಿ ?

**ಮೈತ್ರೇಯಿ**— ಇದೇ ಕೋಣೆಯಲ್ಲಿ. ಎಲ್ಲವನ್ನೂ ತಯಾರಿಸಿರುವೆ.

**ಅಮೃತಮತಿ**— ಅವರು ಬರುವದರೊಳಗಾಗಿ ಪ್ರಿಯತಮಗೆ ಬೇಗ ಬರ ಹೇಳು.

**ನಿವೇದಕ**— ಮೈತ್ರೇಯಿ ಗಾಳಿ ಓಟದಿಂದ ಹೋಗಿ ಅಷ್ಟವಂಕನನ್ನು ಕರೆತಂದಳು.

**ಅಮೃತಮತಿ**— ಪ್ರಿಯತಮ, ಈ ಧನವನ್ನು ಸ್ವೀಕರಿಸು.

**ಅಷ್ಟವಂಕ**— ಈ ಧನವನ್ನು ತೆಗೆದುಕೊಂಡು ಏನು ಮಾಡಲಿ? ಸ್ತ್ರೀ ಧನ ನನಗೆ ಇನ್ನು ಇಲ್ಲವೆ ?

**ಅಮತಮತಿ**— ಅದೂ ಇದೆ, ಚಿಂತಿಸಬೇಡ. ನಾನು ಉಜ್ಜಯಿನಿ ನಗರ ವನ್ನು ಬಿಟ್ಟು ಬದುಕಿರುವುದು ಸಾಧ್ಯವೇ ಇಲ್ಲ........ಅಲ್ಲ ನಿನ್ನನ್ನಗಲಿ ಇರುವದು ಶಕ್ಯವೇ ಇಲ್ಲ.

**ಅಷ್ಟವಂಕ**— ಹಾಗಾದರೆ ನಗರದಲ್ಲಿ ಎಲ್ಲರೂ ಆಡುವ ಸುದ್ದಿ ಸುಳ್ಳೆ ?

**ಅಮೃತಮತಿ**— ಸುಳ್ಳು, ಸಂಪೂರ್ಣ ಸುಳ್ಳು.

**ಅಷ್ಟವಂಕ**— ( ಅತ್ಯಾನಂದದಿಂದ ) ಇದು ನಿಜವೆ ?

**ಅಮೃತಮತಿ**— ಸತ್ಯ ! ಗಾನವೆಂದರೆ ಅಮೃತ, ಆ ಅಮೃತವೆಂದರೆ ನೀನು. ನೀನು ಎಂದರೆ ನಾನು. ಈ ಅಮೃತ ಅವರ ಹತ್ತಿರ ನನಗೆ ಎಲ್ಲಿ ದೊರೆಯುವದು ?

**ಅಷ್ಟವಂಕ**— ಇನ್ನು ಪ್ರತಿನಿತ್ಯ............

**ಅಮೃತಮತಿ**— ಇಕೋ, ಆ ಜನರು ಎಲ್ಲರೂ ಇಲ್ಲಿಯೆ ಇರುವರು. ಯಾರಿಗೂ ಕಾಣದಂತೆ ಮರೆಯಾಗು.

**ಅಷ್ಟವಂಕ**— ಹಾಗೆಯೆ ಆಗಲಿ.

**ಅಮೃತಮತಿ**— ಮೈತ್ರೇಯಿ.

**ಮೈತ್ರೇಯಿ**— ಏನು ದೇವಿಯವರೇ ?

**ಅಮೃತಮತಿ**— ಎಲ್ಲ ಸಿದ್ಧವಾಗಿದೆಯೆ ?

**ಮೈತ್ರೇಯಿ**— ಆಗಿದೆ, ದೇವಿಯವರೆ.

**ಅಮೃತಮತಿ**— ನಾನು ತಿಳಿಸಿದಂತೆ ಎಲ್ಲವನ್ನೂ ಮಾಡಿರುವೆಯಾ ?

**ಮೈತ್ರೇಯಿ**— ಆಹುದು ದೇವಿಯವರೆ.

**ಅಮೃತಮತಿ**— ಅತ್ಯಂತ ಗುಪ್ತವಾಗಿರಲಿ.

**ಮೈತ್ರೇಯಿ**— ನನಗೆ ಇದನ್ನು ಹೇಳಬೇಕೆ !

**ನಿವೇದಕ**— ಹೆಣ್ಣಿನ ಮನ ನೋಯಿಸಲೊಲ್ಲದ ಯಶೋಧರ ಸವಿಯೂಟಕ್ಕೆ ಒಪ್ಪಿಕೊಂಡು ಆಹಾರವನ್ನು ಅನುಭವಿಸುತ್ತಿದ್ದಾನೆ. ಅವನ ಸಂಗಡಲೆ ಚಂದ್ರಮತಿ ಊಟಕ್ಕೆ ಕುಳಿತುಕೊಂಡಿದ್ದಾಳೆ.

**ಅಮೃತಮತಿ**— ದೇವರೆ, ಅತ್ತೆಯವರೆ, ಹೇಗಿದೆ ಊಟದ ರುಚಿ ?

**ಚಂದ್ರಮತಿ**— ಅಮೃತಮತಿ, ನೀನು ಬಡಿಸಿದುದೆಲ್ಲವೂ ಅಮೃತವಾಗಿದೆ. ನಿನ್ನ ತಕ್ಕಂತೆ ನಿನ್ನ ನಡೆ ನುಡಿ ಇದೆ.

**ಮೈತ್ರೇಯಿ**— ಇಂಥ ಅಮೃತ ಇನ್ನು ಎಂದಿಗೆ ದೊರೆಯಬೇಕು ! ತಪೋವನದಲ್ಲಿ ಎಲ್ಲವನ್ನೂ ತ್ಯಜಿಸಬೇಕಾಗುವದು. ತೆಗೆದುಕೊಳ್ಳಿ, ಇನ್ನೂ ತೆಗೆದುಕೊಳ್ಳಿ.

**ಅಮೃತಮತಿ**— ಎಲ್ಲರಿಗೂ ತೃಪ್ತಿಯಾಗುವಂತೆ ಬಡಿಸು ಮೈತ್ರೇಯಿ.

**ಮೈತ್ರೇಯಿ**— ಅದು ನನಗೆ ತಿಳಿಯದೆ ? ಮಹಾರಾಜ, ಈ ಲಡ್ಡುಗಳನ್ನು ತೆಗೆದುಕೊಳ್ಳಿ. ಬಹಳ ರುಚಿಯಾಗಿವೆ.

**ಯಶೋಧರ**— ಹೂಂ, ಅದೊಂದು ಲಡ್ಡನ್ನು ತಾ. ಬಹಳ ರುಚಿಯಾಗಿವೆ. (ನಗುವನು).

[ಕೊಂಚ ಸಮಯ ಸ್ತಬ್ಧತೆ; ಒಮ್ಮೆಲೆ ಹಾಹಾಕಾರ ! ಅಯ್ಯೋ ಅಯ್ಯೋ ಎಂಬ ಕೂಗು ! ನಂಜಿನ ಲಡ್ಡುಗಳು ! ಮಹಾರಾಜ ಯಶೋಧರರಾಜರ ಕೊಲೆ ! ಚಂದ್ರಮತಿ ದೇವಿಯವರ ಕೊಲೆ ! ... . ಅನೇಕ ಗದ್ದಲ ಕೇಳಿಬರುವದು. ]

**ಒಂದು ಧ್ವನಿ**— ಈ ನೀಚಳನ್ನು ಯಮನು ಒಯ್ಯಲು ಏಕೆ ಹೇಸಿದನೊ !

**ಎರಡನೆಯ ಧ್ವನಿ**—ಇವಳು ಅಮೃತಮತಿಯಲ್ಲ! ವಿಷಮತಿ! ನಮ್ಮ ರಾಜ್ಯದಲ್ಲಿ ವಿಷದ ಗಾಳಿಯನ್ನು ತೂರಿದವಳು !

**ಮೂರನೆಯ ಧ್ವನಿ**— ಪಾಪದ ಹುಳಿಯಿಂದ ಇವಳು ಹುಳ ಹತ್ತಿ ಸಾಯಬೇಕು.

**ಅಮೃತಮತಿ**— (ಗದ್ದಲದ ಹಿನ್ನೆಲೆಯಲ್ಲಿ) ಮೈತ್ರೇಯಿ, ಆ ಮಾವುತನನ್ನು ಕರೆ.

ಜನರ ನಾಲಗೆಯನ್ನು ಹಿಡಿಯುವವರು ಯಾರು ? ಇಂದಿನಿಂದ ನಾನು ಸ್ವತಂತ್ರಳು. ಮನಬಂದು ನಲಿಯುವೆ.........ಪ್ರಿಯತಮ, ನಿನ್ನ ಗಾನದ ಅಮೃತ ನನಗೆ ಇನ್ನೂ ಬೇಕು. ಬೇಕೇಬೇಕು.

[ ಕೊನೆಗೆ ಅಷ್ಟವಂಕನ ಗಾಯನದ ಧ್ವನಿ. ]

# ರತ್ನಾಜಿ

[ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗಿಂತ ಮೊದಲು, ೧೪ನೆಯ ಶತಮಾನದ ಆದಿಭಾಗದಲ್ಲಿ, ಕುಮಾರರಾಮನೆಂಬ ಮಹಾ ಶೂರನು ಮಿಂಚಿ ಮಾಯವಾದನು. ಈ ಪರದಾರ ಸೋದರನಾದ ಕುಮಾರರಾಮನನ್ನು ವರಿಸಲು ಡೊಂಬರತ್ತಿ ರತ್ನಾಜಿ ಬಹು ವಿಧವಾಗಿ ಯತ್ನಿಸಿದಳು. ರತ್ನಾಜಿಯ ಪ್ರಣಯಕಥೆಯ ನಿರೂಪಣೆಯೇ ಈ ಬಾನುಲಿ ನಾಟಕ.

ಕುಮಾರರಾಮನನ್ನು ಹೊಗಳುವ ಸುಮಾರು ನಾಲ್ಕು ಸಾಂಗತ್ಯಗಳು ಕನ್ನಡದಲ್ಲಿ ಸಿಕ್ಕಿವೆ. (೧) ಕ್ರಿ. ಶ. ಸುಮಾರು ೧೫೨೫ರಲ್ಲಿ ನಂಜುಂಡನು ಬರೆದ ಕುಮಾರರಾಮ ಕಥೆ, (೨) ಕ್ರಿ. ಶ. ಸುಮಾರು ೧೬೫೦ರಲ್ಲಿ ಗಂಗನು ಬರೆದ ಕುಮುಟಿರಾಮನ ಕಥೆ, (೩) ಹಂಪೆಯ ಚರಪತಿ ಮಹಲಿಂಗಸ್ವಾಮಿಗಳು ಬರೆದ ಬಾಲಕುಮಾರರಾಮ ಸಾಂಗತ್ಯ (೪) ನಾಗಸಂಗಯ್ಯ ಬರೆದ ಪರನಾರಿಯರಿಗೆ ಸಹೋದರನೆಂಬಂಥ ಕಥೆ.

ಇವೆಲ್ಲವುಗಳಲ್ಲಿ ಪ್ರಾಮುಖ್ಯವಾಗಿ ಕಂಡುಬರುವ ರತ್ನಾಜಿಯ ಕಥೆಯನ್ನು ಆಧರಿಸಿ ಈ ಬಾನುಲಿ ನಾಟಕವನ್ನು ರಚಿಸಲಾಗಿದೆ. ]

ಪಾತ್ರಗಳು :

೧. ಕಂಪಿಲರಾಯ
೨. ಬೈಚಪ್ಪ ಮಂತ್ರಿ
೩. ಕುಮಾರರಾಮ
೪. ಸಿಂಗಯ್ಯ
೫. ರತ್ನಾಜಿ
೬. ರಾಮಲಾದೇವಿ
೭. ನೇಮಿಖಾನ
೮. ಶಾಸ್ತ್ರಿ

ಮತ್ತು ಕುಮಾರರಾಮನ ಉಳಿದ ಹೆಂಡಂದಿರು

ಸ್ಥಳ : ಕುಮ್ಮಟದುರ್ಗ    ಕಾಲ : ೧೪ನೆಯ ಶತಮಾನದ ಆದಿಭಾಗ

# ದೃಶ್ಯ ೧

( ಆನಂದ ಕೊಡುವ ಸಂಗೀತ )

**ಕುಮಾರರಾಮ**— ಚಿಕ್ಕಮ್ಮಾ, ದಾರೀ ಬಿಡು ಹೋಗುತ್ತೇನೆ.

**ರತ್ನಾಜಿ**— ಕುಮಾರರಾಮ. ನಿನ್ನ ರೂಪಿಗೆ ಸೋತಿದ್ದೇನೆ. ನನ್ನನ್ನು ಒಲಿದು ನೀನು ಕಾಪಾಡಬೇಕು.

**ಕುಮಾರರಾಮ**— ಛೀ, ರತ್ನಮ್ಮ, ನೀನು ನನಗೆ ತಾಯಿ ಸಮಾನಳು; ನನ್ನ ತಾಯಿ ಹರಿಯಮ್ಮನ ಹಾಗೆ; ನೀನು ನನ್ನಲ್ಲಿ ಮನಸ್ಸಿಡಬಹುದೆ? ನಿರ್ಮಲಚಿತ್ತಳಾಗಿ ನನ್ನನ್ನು ಬಿಟ್ಟುಬಿಡು.

**ರತ್ನಾಜಿ**— ಕಂದರ್ಪನ ಹೂಬಾಣದ ಏಟು ಬಲವಾಗಿದೆ. ನನ್ನ ಕೈಗೆ ಸಿಕ್ಕಿರುವ ನಿನ್ನನ್ನು ಎಂದಿಗೂ ಬಿಡೆನು.

**ಕುಮಾರರಾಮ**— ಇದೇನು ಚಿಕ್ಕಮ್ಮ, ಎಂತಹ ಮಾತು! ಅಯ್ಯೋ, ಇಂತಹ ಸಲ್ಲದ ಮಾತುಗಳನ್ನು ಯಾವ ಕಿವಿಯಿಂದ ಕೇಳಲಿ! ಈ ಮುತ್ತಿನ ಚಂಡನ್ನಾದರೂ ತೆಗೆದುಕೊಂಡು ಹೋಗಲು ನಾನೇಕೆ ಬಂದೆನೋ?

**ರತ್ನಾಜಿ**— ಮುತ್ತಿನಂತಹ ಸಮಯ! ಇದರಲ್ಲಿ ಏನು ತಪ್ಪು? ನೀನು ಆ ಮುತ್ತಿನ ಚಂಡು ಆಡುತ್ತಿರುವಾಗ ನಾನು ಉಪ್ಪರಿಗೆಯ ಮೇಲೆ ಕುಳಿತು ಬೆಪ್ಪಳಾಗಿ ನೋಡುತ್ತಿದ್ದೆ. ಸೃಷ್ಟಿಯ ಚೆಲುವೆಲ್ಲವೂ ನಿನ್ನಲ್ಲಿ ಮನೆಮಾಡಿದೆ, ನೋಡು. ನೀನು ಲಗ್ಗೆ ಹೊಡೆದಾಗ್ಗೆ ಚಂಡು ಹಾರಿ ಬಂದು ನನ್ನ ಮನೆಯೊಳಗೆ ಬೀಳಲು, ನನ್ನ ಹೃದಯ ಅತ್ಯಾನಂದದಿಂದ ಹಾರಿತು. ನನ್ನ ಪ್ರೀತಿಯ ಮನೆಯ ಬಾಗಿಲವೇ ತೆರೆದಂತಾಯಿತು.

**ಕುಮಾರರಾಮ**—ಚಿಕ್ಕಮ್ಮ, ಹಿರಿಯಳಾದ ನಿನಗೆ ನಾನು ಏನು ಹೇಳಲಿ?

**ರತ್ನಾಜಿ**— ಏನೂ ಹೇಳಬೇಕಾಗಿಲ್ಲ. ಸೂಲದ ಹಬ್ಬದ ದಿನ ನಾನು ನಿನ್ನನ್ನು ಕಂಡೆನು. ಅಂದೇ ನಿನ್ನನ್ನು ಮೋಹಿಸಿದೆನು. ನನ್ನ ಅರಮನೆಗೆ

ನಿನ್ನನ್ನು ಕರೆತರಬೇಕೆಂದರೆ ನಿನ್ನ ಅಮ್ಮನು ಇಲ್ಲಿ ನೀನು ಬರದ ಹಾಗೆ ನೋಡಿಕೊಳ್ಳುತ್ತಿದ್ದಳು. ಈಗ ಹೇಗೆ ಸಿಕ್ಕಿರುವೆ? ಸುದೈವವೆಂದರೆ ಹೀಗೆ! ವಿಚಾರಿಸಿ ನೋಡು, ಬಾಲೆಯೇ ನಿನ್ನನ್ನು ಮೋಹಿಸಿ ಬಂದರೆ ಒಲ್ಲೆನೆಂದು ಹೇಳುವದು ಯೋಗ್ಯವೆ?

**ಕುಮಾರರಾಮ**— ಸಾಕುಮಾಡು ಚಿಕ್ಕಮ್ಮ, ನಾನು ಪರದಾರಸೋದರ ರಾಮನೆಂಬ ಹೆಮ್ಮೆ ನನಗಿದೆ ನನ್ನ ಶೀಲದ ಬಗ್ಗೆ ನನಗೆ ವಿಶ್ವಾಸವಿದೆ. ಇಗೋ ನೋಡು, ನನ್ನ ಎಡಗಾಲಿನಲ್ಲಿ ಆ ಪರದಾರಸೋದರ ಕಡಗ ವಿದೆ.

**ರತ್ನಾಜಿ**— ಇರಲಿ. ಆದೇ ವಾದಗಳಿಗೆ ನಮಸ್ಕರಿಸುವೆ. ಪ್ರೀತಿಯ ಕಣ್ಣಿಗೆ ಎಲ್ಲವೂ ಹಿರಿಯದೇ! ನೀನು ಒಲಿದರೆ ಆ ಮುದಿ ಕಂಪಿಲನನ್ನು ವಿಷ ವನ್ನಿಟ್ಟು ಕೊಲ್ಲಿಸುವೆನು ಮುಂದಿನ ಪಟ್ಟವು ನಿನಗೆ ಸಿದ್ಧವು.

**ಕುಮಾರರಾಮ**— ಈ ದುರ್ಗುಣವು ನಿನಗೆ ನೀತಿಯೇ? ಇಂಥ ಪಾಪಕ್ಕೆ ಒಳಗಾಗಬೇಡ

**ರತ್ನಾಜಿ**— ಪಾಪಪುಣ್ಯದ ಸುತ್ತೆಲ್ಲವೂ ನನಗೆ ತಿಳಿಯದು, ಕಾಮರೂಪ ರಾಮ. ನಾನು ಸೈರಿಸಲಾರೆ. ನನಗೆ ನೀನು ಏನಾದರೂ ಅನ್ನು. ನನ್ನ ಮಾತಿಗೆ ಒಪ್ಪಿಗೆ ಇಲ್ಲದಿದ್ದರೆ ನನ್ನನ್ನು ಇಲ್ಲಿಯೇ ಕೊಂದುಹೋಗು.

**ಕುಮಾರರಾಮ**— ಅಲ್ಪ ಸುಖಕ್ಕೆ ಕಾತುರಪಡಬೇಡ. ಇದನ್ನು ಜನರು ಕೇಳಿದರೆ ಓಕರಿಸಿ ನಿಂದಿಸುವರು ನನ್ನನ್ನು ಕೈ ಬಿಡಮ್ಮ.

**ರತ್ನಾಜಿ**— ರಾಮ, ಲೋಕದ ಬೆದರಿಕೆಗೆ ಹೆದರಬೇಡ. ನಿನ್ನನ್ನು ಹೆತ್ತವಳು ರತ್ನಮ್ಮ, ಸಾಕಿದವಳು ಮರಿಯಮ್ಮ ಎಂದು ಲೋಕವರಿಯುವಂತೆ ಮಾಡುವೆ.

**ಕುಮಾರರಾಮ**— ಮಾತೆಯೇ ಬೇಡ, ಬೇಡ, ಈ ಅಪಕೀರ್ತಿ ಬೇಡ. ನನ್ನನ್ನು ಬಿಟ್ಟುಬಿಡು. ಚೆಂಡನ್ನು ಕೊಡಮ್ಮಾ ಹೊರಗೆ ಕಾಟಣ್ಣ ಮೊದಲಾದವರು ನನ್ನ ಹಾದಿ ಕಾಯುತ್ತಿರುವರು. ನನ್ನ ಚೆಂಡು ಕೊಡಮ್ಮಾ.

**ರತ್ನಾಜಿ**— ಆ ಚಂಡಿನ ಮಾತನ್ನು ಬಿಡು, ಹೆಂಡತಿಯನ್ನು ಮಾಡಿಕೊಳ್ಳುವ ಮಾತನಾಡು.

**ಕುಮಾರರಾಮ**— ಅಯ್ಯೋ, ಈ ಪಾಪದ ಮಾತುಗಳನ್ನು ಕೇಳಲಾರೆನು! ಜಟ್ಟಂಗಿ ರಾಮೇಶ! ನನಗೆ ಎಂಥ ಆಪತ್ತನ್ನು ತಂದೆ! ಪರಪತ್ನಿಯನ್ನು ಮೋಹಿಸುವ ಪುರುಷನು ಹೊಲೆಯನಿಗೆ ಸರಿಸಮಾನನು.

**ರತ್ನಾಜಿ**— ನೀತಿಶಾಸ್ತ್ರವನ್ನು ಕೇಳಲು ನಾನು ನಿನ್ನನ್ನು ಇಲ್ಲಿಗೆ ಕರೆಯಿಸ ಲಿಲ್ಲ. ಧರ್ಮದ ನಡತೆಯಲ್ಲಿ ಹುರುಳಿಲ್ಲ. ಬ್ರಹ್ಮನು ತನ್ನ ಸುತೆಯನ್ನೇ ಸತಿಯನ್ನಾಗಿ ಮಾಡಿಕೊಂಡನು. ಗೊತ್ತಿಲ್ಲವೆ?

**ಕುಮಾರರಾಮ**— ತಾಯೀ, ಈ ಮಾತು ಸರ್ವಥಾ ಆಡಬೇಡಾ. ಇನ್ನು ನಾನು ಹೋಗುತ್ತೇನೆ.

**ರತ್ನಾಜಿ**— ನೀನು ಹೋಗಲು ಶಕ್ಯವಿಲ್ಲ. ನಿನ್ನನ್ನು ನಾನು ಬಿಡುವದಿಲ್ಲ.... ತಂದೆ ಏರಿದ ಪಲ್ಲಕ್ಕಿಯನ್ನು ಮಗನು ಏರಲಾರನೇ?

**ಕುಮಾರರಾಮ**— ಪಾಪೀ ದಾರೀ ಬಿಡು. ನನಗೆ ನೀನೂ ಬೇಡಾ, ಆ ಚಂಡೂ ಬೇಡಾ; ದಾರೀ ಬಿಡು.

[ ಧಡೀರನೇ ಬಾಗಿಲದ ಸಪ್ಪಳ, ಬಳೆ ಚೂರುಚೂರಾದ ಸಪ್ಪಳ ]

**ರತ್ನಾಜಿ**—( ಸ್ವಲ್ಪ ಸಮಯದ ನಂತರ ಸಾವಧಾನವಾಗಿ ಚೇತರಿಸುತ್ತ ) ಹೊರಟು ಹೋದನೇ? ( ಸಿಟ್ಟಿನ ಆವೇಶದಲ್ಲಿ ಹಲ್ಲು ಕಡಿದು ) ನನ್ನನ್ನು ತುಳಿದು ಹೋದನಲ್ಲವೇ? ನನ್ನನ್ನು ಒದೆದು ಹೋದನಲ್ಲವೇ? ಪಾಪಿ! ಪಾಪಿ! ಇರಲಿ! ಹೂಂ ಇರಲಿ. ಇದರ ಫಲವನ್ನು ತಾನೇ ಭೋಗಿಸುವನು.

## ದೃಶ್ಯ ೨

[ ಭೇರಿ, ಮೃದಂಗ, ತಮ್ಮಟೆ, ಕಹಳೆ ಮುಂತಾದವುಗಳ ಭೋರೆಂಬ ನಾದ. ಕಂಪಿಲರಾಯನಿಗೆ ಜಯವಾಗಲಿ, ಜಯವಾಗಲಿ ಎಂಬ ಜನರ ಕೂಗು. ]

( ಕಂಪಿಲರಾಯನಿಗೆ ಆರತಿ ಎತ್ತುವ ಹಾಡು )

**ನಿವೇದಕ**— ಕಂಪಿಲರಾಯ ಬೇಟೆಯಾಡಿ ತಿರುಗಿ ಬಂದಾಗ ಜನರೆಲ್ಲ ಸಂತೋಷ ಗೊಂಡರು. ಆದರೆ ಕಂಪಿಲರಾಯನಿಗೆ ನೆಮ್ಮದಿ ಇಲ್ಲ. ಆರತಿ ಎತ್ತುವಾಗ ಹೆಂಗಸರಲ್ಲಿ ರತ್ನಾಜಿಯೇ ಕಾಣಲಿಲ್ಲ. ಕೂಡಲೆ ಕಂಪಿಲರಾಯ ಆವಳ ಅರ ಮನೆಯ ಕಡೆಗೆ ಹೊರಟುಹೋದನು.

[ ಟಿಕ್, ಟಿಕ್ ಎಂದು ಹೆಜ್ಜೆಯ ಸಪ್ಪಳ. ಸ್ತಬ್ಧತೆ. ]

**ಕಂಪಿಲರಾಯ**— ( ಆಶ್ಚರ್ಯದಿಂದ ) ........ಇದೇನು ? ಬಳೆಗಳು ಒಡೆದು ಚೂರುಚೂರಾಗಿವೆ? ಮುತ್ತುಗಳು ಚಲ್ಲಾಪಿಲ್ಲಿಯಾಗಿವೆ?.... ...ಚಿನ್ನದ ಬಳೆ ಬಿದ್ದಿವೆ. ನನ್ನ ಚಿನ್ನ; ರತ್ನಾಜಿ; ಹೀಗೇಕೆ ಮುಸುಕು ಹಾಕಿ ಬಿದ್ದುಕೊಂಡಿರುವೆ? ಏಕೆ ಹೇಳು. ಮಾತನಾಡುವದಿಲ್ಲವೇ? ಏನಾ ಗಿದೆ ನಿನಗೆ? ನಿನ್ನನ್ನು ಬಿಟ್ಟು ಹಲವು ದಿನ ಬೇಟೆಗೆಂದು ಹೋದೆ ನೆಂದು ಕೋಪ ಬಂದಿದೆಯೋ? ಏನಾಗಿದೆ ಹೇಳು, ಏಳು. ನನ್ನಾಣೆ ಯಾಗಿದೆ. ಹೇಳು ರತ್ನಾಜಿ.

**ರತ್ನಾಜಿ**— ( ಅಣಕದಿಂದ ) ಕುಮಾರರಾಮ ನಿಮಗೆ ಹಿತ ಮಾಡುವ ಮಗ ನಲ್ಲವೆ ?

**ಕಂಪಿಲರಾಯ**— ಅವನ ಬಗ್ಗೆ ಈ ವಿಚಾರವೇಕೆ ?

**ರತ್ನಾಜಿ**— ( ಅಣಕದಿಂದ ) ಅವನಲ್ಲಿ ಎಲ್ಲ ಸದ್ಗುಣಗಳು ಇವೆಯಲ್ಲವೆ ?

**ಕಂಪಿಲರಾಯ**— ಮುದ್ದು ರತ್ನಾಜಿ, ನಿನಗೆ ಆದದ್ದಾದರೂ ಏನು? ಹೀಗೇಕೆ ಮಾತನಾಡುವಿ ?

**ರತ್ನಾಜಿ**— ( ನಿಟ್ಟುಸಿರು ಬಿಟ್ಟು ) ಇನ್ನು ನೀವು ನನ್ನ ಆಸೆಯನ್ನು ಬಿಟ್ಟು ಬಿಡಿ.

**ಕಂಪಿಲರಾಯ**— ಏನು ? ಏನಾಗಿದೆ? ಎಲ್ಲ ಸರಿಯಾಗಿ ಹೇಳು.

**ರತ್ನಾಜಿ**— ಕುಮಾರರಾಮ ಬೇಟೆಗೆ ಏಕೆ ಬರಲಿಲ್ಲ ಗೊತ್ತೇ ? ಅವನಿಗೆ ಬೇರೆ ಬೇಟೆಯಾಡುವದಿತ್ತು.

**ಕಂಪಿಲರಾಯ**— ಏನಂದಿ ರತ್ನಾಜಿ ? ಕುಮ್ಮಟದುರ್ಗದಲ್ಲಿ ಕುಳಿತು ಏನು ಮಾಡಿದ ?

**ರತ್ನಾಜಿ**— ಚಂಡಿನ ಆಟವಾಡಿದ; ತುಂಗಭದ್ರೆಯ ಜಲದಲ್ಲಿ ಮಿಂದು ಅರಮನೆಗೆ ಬಂದ. ಆಮೇಲೆ ಶೃಂಗಾರ ಮಾಡಿಕೊಂಡು ಎಲ್ಲ ಮನ್ನೆಯರನ್ನೂ ಕೂಡಿಸಿಕೊಂಡು ಚಂಡಿನ ಆಟವಾಡಲು ಬೀದಿಯಲ್ಲಿ ನಡೆದು ಹೋದ.

**ಕಂಪಿಲರಾಯ**— ಅವನು ಚಂಡಿನ ಆಟವನ್ನು ಬಹಳ ಚನ್ನಾಗಿ ಆಡುತ್ತಾನೆ. ಅಂದಮೇಲೆ ಪಟ್ಟಣದ ಜನರೆಲ್ಲರೂ ಬಹಳ ಉತ್ಸವದಿಂದ ಆ ಆಟವನ್ನು ನೋಡಿರಬೇಕಲ್ಲವೆ ?

**ರತ್ನಾಜಿ**— ಹೂಂ ! ಅಹುದು ! ಹೆಂಗಸರು ಅನೇಕರು ನೋಡುತ್ತಿದ್ದರು. ಅವರು ನೋಡಬೇಕೆಂದೇ ಆಟವನ್ನು ಆಡುತ್ತಿದ್ದನೋ ಏನೋ ! ಆದರೆ ಆಟವಾಡುವ ಸ್ಥಳ ಇವನಿಗೆ ಬೇರೆ ಸಿಗಲಿಲ್ಲವೆ ?

**ಕಂಪಿಲರಾಯ**— ಏಕೆ ? ಎಲ್ಲಿ ಆಟವನ್ನಾಡಿದನು ?

**ರತ್ನಾಜಿ**— ನನ್ನ ಅರಮನೆಯ ಸ್ಥಳವೇ ಆಟವಾಡಲು ಯೋಗ್ಯವೆಂದು ಇಲ್ಲಿಗೆ ಬಂದನು. ( ಧ್ವನಿ ಬದಲಿಸಿ ) ಅಯ್ಯೋ !

**ಕಂಪಿಲರಾಯ**— ಇದೇನು ಮುದ್ದು ರತ್ನಾಜಿ ! ಒಮ್ಮೆಲೇ ಮುಖ ಕೆಳಗೆ ಮಾಡುತ್ತೀ ಏಕೆ ? ಹೀಗೇಕೆ ? ಏನು ಆಯಿತು ?

**ರತ್ನಾಜಿ**— ನಿಮ್ಮ ಮುಂದೆ ಏನು ಹೇಳಲಿ ? ಸತಿ ಯಾವಾಗಲಾದರೂ ಪತಿಯ ಸಮೀಪವೇ ಇರಬೇಕು. ಹೂವಿನ ಸೌರಭವಾಗಿರಬೇಕು.

**ಕಂಪಿಲರಾಯ**— ಏನು ಹೇಳಬೇಕೆನ್ನುತ್ತಿರುವೆ ರತ್ನಾಜಿ; ಹೇಳಿಬಿಡು; ನನ್ನ ಮುಂದೆ ಏನೂ ಮುಚ್ಚಿ ಇಟ್ಟುಕೊಳ್ಳಬೇಡ.

**ರತ್ನಾಜಿ**— ಅದೇ, ಕುಮಾರರಾಮನಿಗೆ ಚಂಡಿನ ಆಟ ಒಂದು ನೆವ ಮಾತ್ರ. ಚಂಡು ನನ್ನ ಮನೆಯೊಳಗೆ ಬೇಕಂತಲೇ ಬರುವಂತೆ ಮಾಡಿದನು. ನೀವು ಪಟ್ಟಣದಲ್ಲಿ ಇಲ್ಲದುದನ್ನು ತಿಳಿದು ನೇರವಾಗಿ ನನ್ನ ಕೋಣೆಗೇ ಬಂದನು.

**ಕಂಪಿಲರಾಯ**— ಕುಮಾರರಾಮ ಇಷ್ಟು ಬದಲಾಗಿರುವನೇ ? ಅಯ್ಯೋ ಪಾಪಿ ! ದುರ್ಗುಣಿ !

**ರತ್ನಾಜಿ**— ನನ್ನ ಮುಂಗೈ ಹಿಡಿದೆಳೆದನು; ಅಯ್ಯೋ! ತಂದೆ ಮಗ ಇಬ್ಬರಿಗೂ ಸತಿಯಾಗಿ ಜೀವಿಸಲಾರೆನು. ( ದುಃಖಿಸುವಳು )

**ಕಂಪಿಲರಾಯ**— ನನ್ನ ಹೊಟ್ಟೆಯಲ್ಲಿ ಎಂಥ ಮಗ........!

**ರತ್ನಾಜಿ**—ಇಷ್ಟೇ ಅಲ್ಲ, ಅವನು ನಿಮ್ಮನ್ನು ತಿರಸ್ಕರಿಸಿದನು. "ಗಂಡ ಮುದುಕ, ನೀನು ಪ್ರಾಯದ ನಯನಮನೋಹರೆ" ಎಂದು ಮಾತನಾಡಿದ.

**ಕಂಪಿಲರಾಯ**— ಇಂತಹ ಮಾತುಗಳನ್ನು ಕೇಳಬೇಕಾಯಿತೇ ? ದ್ರೋಹಿ! ಪಾಪಿ! ಇವನಿನ್ನು ಜೀವಿಸಿರುವದೇ ಸಾಧ್ಯವಿಲ್ಲ

**ರತ್ನಾಜಿ**— ನಿನ್ನ ಸೊಸೆಯಾಗಿ ನಾನು ಹೇಗೆ ಬಾಳಬೇಕು? ಕುಮಾರ ರಾಮನ ಮೇಲೆ ಮಗನ ವಾತ್ಸಲ್ಯ ನಿಮಗಿದ್ದರೆ ಇರಲಿ.

**ಕಂಪಿಲರಾಯ**— ಪ್ರೀತಿ ಇರುವದು ಎಂದೂ ಸಾಧ್ಯವಿಲ್ಲ.

**ರತ್ನಾಜಿ**— ನನಗಂತೂ ಅವನ ಕಡಿದ ತಲೆ ನೋಡದಿದ್ದರೆ ಸಮಾಧಾನವೇ ಇಲ್ಲ. ಒಂದುವೇಳೆ ನೀವು ಈ ಕೆಲಸವನ್ನು ಮಾಡಿಸದಿದ್ದರೆ ನಾನು ವಿಷ ಪಾನಮಾಡಿ ಸಾಯುವೆನು.

**ಕಂಪಿಲರಾಯ**—ಬೇಡ ಬೇಡ ರತ್ನಾಜಿ. ಕುಮಾರರಾಮ ಬದುಕಿದ್ದರೆ ನಮ್ಮ ವಂಶಕ್ಕೆ ಒಂದು ದೊಡ್ಡ ಕಲಂಕ! ಚಿರಸ್ಥಾಯಿಯಾದ ಕಲಂಕ! ನನ್ನ ಶಕ್ತಿಯ ಬೆಳಕಿನಿಂದ ಇದನ್ನು ಹೋಗಲಾಡಿಸಲೇ ಬೇಕು.

**ರತ್ನಾಜಿ**— ನನ್ನ ಕೊರಳಾಣೆಯಾಗಿಯೂ ನೀವು ಈ ಕೆಲಸ ಮಾಡಿಸುವಿರಾ?

**ಕಂಪಿಲರಾಯ**— ನೀನು ಬದುಕುವದು ಎನಗೆ ಬೇಡವೇ? (ರಾಜನು ಹೋದ ಸಪ್ಪಳ).

**ರತ್ನಾಜಿ**— (ನಗುತ್ತ) ಅಹ–ಹ–ಹ–ಹ! ಕುಮಾರರಾಮನ ಸೊಕ್ಕು! ಅದರ ನಾಶ ಬೇಗನೇ ಆಗಲಿದೆ.

## ದೃಶ್ಯ ೩

(ನೃತ್ಯ ಸಂಗೀತ)

**ಬೈಚಪ್ಪ ಮಂತ್ರಿ**— ಬಿಜಯಂಗೈಯಬೇಕು ಮಹಾರಾಜ.

**ಕಂಪಿಲರಾಯ**— ಬೈಚಪ್ಪ ಮಂತ್ರಿಗಳೇ, ನೃತ್ಯ ನಿಲ್ಲಿಸಿ.

**ಮಂತ್ರಿ**— ಮಹಾರಾಜ, ಬೇಟೆಯಾಡಿ ದಣಿದಿರುವಿರಿ ! ಈ ನೃತ್ಯ, ಸಂಗೀತ ನಿಮಗೆ ವಿಶ್ರಾಂತಿ ಕೊಡುವದಿಲ್ಲವೆ ?

**ಕಂಪಿಲರಾಯ**— ( ಜೋರಿನಿಂದ ) ಎಲ್ಲಿಯ ವಿಶ್ರಾಂತಿ ? ಮನಸ್ಸಿಗೆಲ್ಲಿಯ ಶಾಂತಿ ! ಸಾಕುಮಾಡಿ ಈ ಸಂಗೀತವನ್ನು ! (ಸಂಗೀತ ನಿಲ್ಲುವದು. ಗೆಜ್ಜ ಹೋದ ಧ್ವನಿ) ಬೈಚಪ್ಪಮಂತ್ರಿಗಳೇ, ನೀವು ನನ್ನ ತಂದೆಯ ಕಾಲದಿಂದ ಇದ್ದವರು, ಹಿರಿಯರು. ನಿಮ್ಮ ಸಂಗಡ ನನಗೆ ಕುಮಾರರಾಮನ ಬಗ್ಗೆ ಗುಪ್ತವಾಗಿ ವಿಚಾರ ಮಾಡಬೇಕಾಗಿದೆ.

**ಮಂತ್ರಿ**— ಯಾವ ಸಂಗತಿ ಅದು ಮಹಾರಾಜ ?

**ಕಂಪಿಲರಾಯ**— ಕುಮಾರ ಹಾಳಾಗಿ ಹೋಗಿದ್ದಾನೆ. ನಾವು ಯಾರೂ ಕೋಟೆಯಲ್ಲಿ ಇಲ್ಲದಿರುವಾಗ........

**ಮಂತ್ರಿ**— (ಆಶ್ಚರ್ಯದಿಂದ) ಏನು ಮಾಡಿದನು ?

**ಕಂಪಿಲರಾಯ**— ಶೀಲವೆಲ್ಲ ನಾಶವಾಯಿತು. ನಮ್ಮ ಮನೆತನಕ್ಕೆ ದೊಡ್ಡ ಕಲಂಕ !

**ಮಂತ್ರಿ**— ಅಯ್ಯೋ ! ಇದು ಸತ್ಯವೇ ?

**ಕಂಪಿಲರಾಯ**— ಸತ್ಯ ! ಸತ್ಯ ಬೈಚಪ್ಪನವರೆ. ನಾನು ರತ್ನಾಜಿಯನ್ನು ಎಷ್ಟು ಪ್ರೀತಿಸುವೆನೆಂಬುದು ನಿಮಗೆ ಗೊತ್ತಿದೆ. ಹಿಂದಕ್ಕೆ ಮೊದಲಸಲ ನಾನು ಅವಳನ್ನು ನೋಡಿದಾಗ—ಆ ಕಥೆ ನಿಮಗೆ ನೆನಪಿದೆಯಲ್ಲವೆ ?

( ಡೊಂಬರ ಆಟದ ಸಪ್ಪಳ. ಇವರ ಹಿನ್ನೆಲೆಯಲ್ಲಿ ಕಂಪಿಲರಾಯನ ಮಾತುಗಳು. )

ಅವಳು ಡೊಂಬರ ಆಟ ಆಡುತ್ತಿದ್ದಳು........ಆ ಮೈಮಾಟ!........ಆ ಕಣ್ಣು ಹೊಳವು !........ಆ ದೇಹಕಾಂತಿ........ಆ ಆಡಂಬರ............ ಮೈ ಎಲ್ಲಾ ಕಣ್ಣಾಗಿ ನೋಡಿದೆ. ಅವಳು ಡೊಂಬರವಳೇ? ಅಲ್ಲ. ಸ್ತ್ರೀರತ್ನ. ಅಂತೆಯೇ ಆ ರತ್ನವನ್ನು ನಮ್ಮ ಅರಮನೆಗೆ ತರಲಿಲ್ಲವೆ ?

**ಮಂತ್ರಿ**— ಮಹರಾಜ, ಕತೆ ನನಗೆ ಗೊತ್ತಿದೆ. ಈ ಸಂಗತಿಯಂತೆ ಕುಮಾರ ರಾಮನನ್ನು ನಾನು ಬಲ್ಲೆ. ಅವನು ಸೋದರ ರಾಮನಾಗಿದ್ದಾನೆ. ಇಂತಹ ಕುಹಕ ವಿದ್ಯೆಯನ್ನು ಮನಸ್ಸಿನಲ್ಲಿಯೂ ಎಣಿಸನು.

**ಕಂಪಿಲರಾಯ**— ಹಾಗಾದರೆ ನೀವೇ ರತ್ನಾಜಿಯ ಅರಮನೆಗೆ ಬನ್ನಿ. ಅಲ್ಲಿ ನಡೆದಿರುವ ವಿದ್ಯಮಾನವನ್ನು ಪರಿಶೀಲಿಸಿ. ನಿಜಸ್ಥಿತಿಯನ್ನು ತಿಳಿದು ಕೊಳ್ಳಿ.

**ಮಂತ್ರಿ**— ಹಾಗಲ್ಲ ಮಹಾರಾಜ, ನಾನು ಹೇಳುವದು ನಿಮಗೆ ಗೊತ್ತಿಲ್ಲವೇ? ದಿಲ್ಲಿಯ ಸುಲ್ತಾನನ ಮಗಳಾದ ಬಾಬಮ್ಮಳು ರಾಮಕುಮಾರನನ್ನು ಮೋಹಿಸಿದಳು. ಅವನನ್ನು ಲಗ್ನವಾಗುತ್ತೇನೆ ಎಂದು ಹಟ ಹಿಡಿದಳು. ಆದರೆ ಕುಮಾರರಾಮ ಒಪ್ಪಿದನೇ? ಇಷ್ಟೇ ಅಲ್ಲ, ಸುಲ್ತಾನನು ಕಳುಹಿಸಿದ ಪಾದುಕಗಳನ್ನು ತುಳಿದನು; ಅವನ ಸೈನ್ಯಕ್ಕೆ ಅಪಮಾನ ಮಾಡಿದನು

**ಕಂಪಿಲರಾಯ**— ನಾನು ಆ ಶೌರ್ಯವನ್ನು ಒಪ್ಪುತ್ತೇನೆ. ಅದು ಹಳೆಯ ಮಾತು. ಆದರೆ ಮನುಷ್ಯನ ಸ್ವಭಾವ ಮಿಂಚಿನಂತೆ ಚಂಚಲ ಈಗ ಸಂಭವಿಸಿರುವದಂತೂ ಸುಳ್ಳಲ್ಲ ! ಬೈಚಪ್ಪಮಂತ್ರಿಗಳೇ, ನನ್ನ ರತ್ನಾಜಿಗೆ ಕುಮಾರರಾಮನ ರುಂಡವನ್ನು ತಂದು ತೋರಿಸುತ್ತೇನೆ ಎಂದು ವಚನ ಕೊಟ್ಟಿದ್ದೇನೆ ಈ ಕೆಲಸವು ಆಗದ ಹೊರತು ನನ್ನ ಮನಸ್ಸಿಗೆ ನೆಮ್ಮದಿ ಇಲ್ಲ.

**ಮಂತ್ರಿ**— ಅಯ್ಯೋ, ಆ ಗಂಡುಗಲಿ ಕುಮಾರರಾಮನನ್ನು ಕೊಲ್ಲಿಸಬೇಕೆ? ಅವನಿಂದಲೇ ನಮ್ಮ ಹೊಸ ಮನೆಗಳು, ಮತ್ತು ಕುಮ್ಮಟದುರ್ಗಗಳು ಸುರಕ್ಷಿತವಾಗಿ ಉಳಿದಿವೆ. ಅವನ ಶೂರತನ, ಸಾಹಸ, ಕೆಚ್ಚು ಇವುಗಳಿಗೆ ಬೆಚ್ಚಿ ಬೆದರಿ ದಿಲ್ಲಿಯ ಸುಲ್ತಾನನೂ ಸಹ ದಕ್ಷಿಣದ ಕಡೆಗೆ ಹಣಿಕಿ ಹಾಕಿಲ್ಲ. ಗಂಡುಗಲಿ ಕುಮಾರರಾಮ; ಅವನೇ ನಮ್ಮ ಆಧಾರಸ್ತಂಭ.

**ಕಂಪಿಲರಾಯ**— ಹಾಗಾದರೆ ನೀವು ಆ ದ್ರೋಹಿ ರಾಮನ ತಲೆಯನ್ನು ಕಡಿದು ತರುವದಿಲ್ಲವೆನ್ನುವಿರಾ? ನಾನು ಹೇಳಿದ ಕಾರ್ಯವನ್ನು ಮಾಡುವದಿಲ್ಲವೆನ್ನುವಿರಾ?

**ಮಂತ್ರಿ**— ಏನು ಹೇಳಲಿ ಮಹಾರಾಜರೇ?

**ಕಂಪಿಲರಾಯ**— ಹಾಗಾದರೆ ನಿಮ್ಮ ನೆರವಿನಿಂದಲೇ ಕುಮಾರರಾಮನ ಆ ಕಾರ್ಯವಾಗಿರಬೇಕು. ಅಂತೆಯೇ ಹೀಗೆ ಮಾತನಾಡುವಿರಿ.

**ಮಂತ್ರಿ**— ಛೀ ! ಈ ಮಾತುಗಳನ್ನು ಆಡಬೇಡಿ.

**ಕಂಪಿಲರಾಯ**— ಹಾಗಾದರೆ ನಾನು ಹೇಳಿದ ಕೆಲಸವನ್ನು ಮಾಡಿ.

**ಮಂತ್ರಿ**— ಒಡೆಯನ ಮಾತುಗಳನ್ನು ಎಂದಿಗೂ ಮೀರುವದಿಲ್ಲ, ಮಹಾರಾಜ.

**ಕಂಪಿಲರಾಯ**— ಒಂದು ವೇಳೆ ಮೀರಿದರೆ ನಿಮ್ಮನ್ನು ಕಲ್ಲುಗಾಣಕ್ಕೆ ಹಾಕಿಸುವೆ.

## ದೃಶ್ಯ ೪

( ಕಟ್ ಕಟ್ ಸಪ್ಪಳ. ಸಿಳ್ಳು ಹಾಕುವದು. )

**ಬೈಚಪ್ಪ**— ಸಿಳ್ಳು ಹಾಕಬೇಡ ಸಿಂಗಯ್ಯ ! ನಿನ್ನ ಸಪ್ಪಳ ಕೇಳಿ ಇಲ್ಲಿಗೆ ಯಾರಾದರೂ ಬಂದಾರು !

**ಸಿಂಗಯ್ಯ**— ಏಕೆ ಬೆದರಿಸುವಿರಿ ? ಈ ರಾತ್ರಿಯ ಹೊತ್ತು ಊರಹೊರಗಿನ ಈ ಜಟ್ಟಂಗಿ ರಾಮೇಶನ ಗುಡಿಗೆ ಯಾವ ಭಟ್ಟಂಗಿ ಬರುತ್ತಾನೆ?

**ಬೈಚಪ್ಪ**— ಭೇಷ್ ! ಆದೇನೇ ಇರಲಿ; ಉಪ್ಪಾರ ಸಂಗಯ್ಯ, ನೀನು ಕೆಲಸವನ್ನು ಬಹು ಜಾಗ್ರತೆಯಿಂದ ಮಾಡಬೇಕು.

**ಸಿಂಗಯ್ಯ**— ಚಿಂತೆ ಮಾಡಬೇಡಿ ಬುದ್ಧಿ; ಮುನ್ನೂರು ಹಾರಿ ಗುದ್ದಲಿಗಳು ಕೆಲಸ ಮಾಡುತ್ತಿವೆ. ಬೆಳಗಾಗುವದರೊಳಗಾಗಿ ನಿಮಗೆ ಇಂಥ ನೆಲಮನೆ ಎಷ್ಟು ಬೇಕು ಹೇಳಿ ಮಾಡಿಕೊಡುತ್ತೇನೆ.

**ಬೈಚಪ್ಪ**— ಈಗ ಇದನ್ನಂತೂ ಮುಗಿಸು. ಬೆಳಗಾದ ಮೇಲೆ ಮುಂದಿನ ಮಾತು. ಜಟ್ಟಂಗಿ ರಾಮೇಶಾ, ನೀನೇ ಕಾಪಾಡು.

**ಸಿಂಗಯ್ಯ**— ಅಲ್ಲ ಬುದ್ಧಿ; ರಾಮನೇನೋ ಇಲ್ಲಿ ಅಡಗಿಕೊಂಡ; ಆದರೆ ಅವನ ತಲೆ ಕಡಿದು ತೋರಿಸಬೇಕು ಅಂದಿರಲ್ಲ, ಅದೂ ಹೇಗೆ ಮಾಡತೀರಿ ?

**ಬೈಚಪ್ಪ**— ದೇವರು, ಜಟ್ಟಂಗಿ ರಾಮೇಶನಿದ್ದಾನೆ. ಅವನೇ ಕಾಪಾಡುವ !

**ಸಿಂಗಯ್ಯ**— ಅನು ಏಕೆ ಬುದ್ಧೀ, ದೇವರನ್ನು ನೀವು ಏನು ಕೇಳುವದು ? ನಾನೇ ನನ್ನ ತಲೆ ಕೊಡಲೋ ?

**ಬೈಚಪ್ಪ**— ಅಯ್ಯೋ, ನಿನ್ನ ತಲೆ ! ಕುಮಾರರಾಮನ ಹಾಗೆ ಏನಾದರೂ ನಿರೀಕ್ಷಣ ನಿನ್ನ ಮುಖದಲ್ಲಿ ಇದೆಯೇ ? ನಿನ್ನ ಸುಂದರ ಕುದರೆಮುಖ ತೆಗೆದುಕೊಂಡು ನಾನೇನು ಮಾಡಲಿ ?

**ಸಿಂಗಯ್ಯ**— ಹಾಗಾದರೆ ಏನು ಮಾಡಬೇಕು ಬುದ್ಧಿ ?

**ಬೈಚಪ್ಪ**— ನೋಡು ಸಿಂಗಯ್ಯಾ, ನಾವು ಒಳ್ಳೆಯವರಿದ್ದರೆ ಎಲ್ಲರೂ ಒಳ್ಳೆಯವರು.

**ಸಿಂಗಯ್ಯ**— ಹೌದು ಬುದ್ಧಿ.

**ಬೈಚಪ್ಪ**— ಆ ಕಳ್ಳ ರಾಮ ನಿನಗೆ ಗೊತ್ತೇನು ?

**ಸಿಂಗಯ್ಯ**— ಗೊತ್ತು, ನೆನಪಾಯಿತು. ನೋಡಿ ಬುದ್ಧಿ, ಒಳ್ಳೇ ಆಳು. ಕುಮಾರರಾಮನಿಗೂ ಅವನಿಗೂ ಏನೂ ಅಂತರವಿಲ್ಲ ನೋಡಿ. ( ಅನುಮಾನದಿಂದ ) ಅವನು ಸಿಕ್ಕರೆ? ಆದರೆ ಕಳ್ಳ ಅವನು.

**ಬೈಚಪ್ಪ**— ಹೂಂ ! ಅವನೇ ತಾನಾಗಿ ತನ್ನ ರುಂಡವನ್ನು ಕೊಡಲು ಒಪ್ಪಿದ್ದಾನೆ. ನಮ್ಮ ಈ ದೇಶ ಜೀವದಾನಕ್ಕಾಗಿ ಎಂದಾದರೂ ಹಿಂದೆ ಬಿದ್ದಿದೆಯೇ ?

**ಸಿಂಗಯ್ಯ**— ಒಳ್ಳೆಮಾತು ಬುದ್ಧಿ. ಆ ಕಳ್ಳ ಬಂಟ ನಿಮ್ಮ ಕೈಯಲ್ಲಿ ಸಿಕ್ಕದ್ದು ಹೆಚ್ಚಿನದು.

**ಬೈಚಪ್ಪ**— ನಾನು ಹಿಂದಕ್ಕೆ ಅವನನ್ನು ಪಾರುಮಾಡಿದ್ದೆ. ರಾಜರ ದೃಷ್ಟಿಗೆ ಬೀಳದಂತೆ ಅವನನ್ನು ಕಾಪಾಡಿದ್ದೆ. ಈಗ ನನ್ನ ಸಲುವಾಗಿ ಏನು ಮಾಡಲೂ ಸಿದ್ಧನಿದ್ದಾನೆ.

**ಸಿಂಗಯ್ಯ**— ನಿಮ್ಮ ಬುದ್ಧಿ ಒಳ್ಳೆಯದು. ಹುಲಿಯನ್ನು ಸಾದುಮಾಡುವವರು ನೀವು ಬುದ್ಧಿ !

**ಬೈಚಪ್ಪ**— ಇಷ್ಟೇ ಅಲ್ಲ ಸಿಂಗಯ್ಯ. ಈಗ ಕುಮಾರರಾಮ ಮತ್ತು ಅವರ ಸಂಗಡಿಗರಿಗೆ ಏಳು ತಿಂಗಳು ಸಾಕಾಗುವಷ್ಟು ಅಕ್ಕಿ, ಕಡಲೆ, ಗೋದಿ,

ಬೆಲ್ಲ, ಎಣ್ಣೆ, ಉಪ್ಪು, ಮೆಣಸಿನಕಾಯಿ, ಅಡಿಕೆ ಎಲ್ಲವನ್ನೂ ಹೊತ್ತು ತಂದು ಇಟ್ಟಿದ್ದಾನೆ.

**ಸಿಂಗಯ್ಯ**— ಅಬ್ಬಾ ! ನೋಡಿ ಬುದ್ಧಿ, ಕಳ್ಳರೂ ನಹ ಹೇಗೆ ಬದಲಾಗುತ್ತಾರೆ !

**ಬೈಚಪ್ಪ**— ಓಹೋ ! ಬೆಳಗಾಗುತ್ತ ಬಂತು ! ಬೇಗ ಮುಗಿಸು ಸಿಂಗಯ್ಯ.

**ಸಿಂಗಯ್ಯ**— ಓಹೋ ! ಮುಗಿಯಿತು ಬುದ್ಧಿ ಬಂದೆ.

**ಬೈಚಪ್ಪ**— ಎಲ್ಲಾ ಚನ್ನಾಗಿ ಆಗಿದೆಯೇ ?

**ಸಿಂಗಯ್ಯ**— ನನ್ನ ಕೆಲಸ ನೋಡಿ ! ಸೂರ್ಯ–ಚಂದ್ರ ಯಾರಿಗೂ ಆ ಸ್ಥಳ ಗೊತ್ತಾಗುವ ಹಾಗಿಲ್ಲ; ಅಷ್ಟು ಚನ್ನಾಗಿದೆ ಮನೆ.

**ಬೈಚಪ್ಪ**— ಆದರೆ ಸಿಂಗಯ್ಯಾ, ನೀನೇ ಈ ಸ್ಥಳವನ್ನು ವೈರಿಗಳಿಗೆ ತೋರಿಸಬೇಡ

**ಸಿಂಗಯ್ಯ**— ನನ್ನಲ್ಲಿ ವಿಶ್ವಾಸವಿಲ್ಲವೇ ಬುದ್ಧಿ ?

**ಬೈಚಪ್ಪ**— ತೆಗೆದುಕೋ ಈ ಬಹುಮಾನಗಳನ್ನು–ಇವು ಮುತ್ತಿನ ಹಾರಗಳು; ಇವು ವಜ್ರದೋಲೆಗಳು; ಇವು ಬಂಗಾರದ ಆಭರಣಗಳು. ಮತ್ತೆ ಈ ಕೆಲಸ ಸಫಲವಾದರೆ ಇನ್ನೂ ನಿನಗೆ ಕೊಡುವೆ.

**ಸಿಂಗಯ್ಯ**— ನಿಮಗೆ ಜಟ್ಟಂಗಿ ರಾಮೇಶ ಕಲ್ಯಾಣ ಮಾಡಲಿ ಬುದ್ಧಿ.

**ಬೈಚಪ್ಪ**— ಅವನು ಕುಮಾರರಾಮನನ್ನು ಕಾಪಾಡಿದರೆ ನಾಕು.

**ಸಿಂಗಯ್ಯ**— ಬರತೇನಿ ಬುದ್ಧಿ !

**ಬೈಚಪ್ಪ**— ಸಿಂಗಯ್ಯ ಹೋಗಿ ಬಾ. ಇಲ್ಲಿ ನೋಡು, ನಿನ್ನ ಮುಂದೆ ಎಲ್ಲವನ್ನೂ ಹೇಳಿದ್ದೇನೆ. ಯಾರ ಮುಂದೆಯೂ ಇದನ್ನು ಹೇಳಬೇಡ ನೋಡು ಮತ್ತೆ !

**ಸಿಂಗಯ್ಯ**— ನನ್ನನ್ನು ಈಗಲೇ ಕೊಂದುಬಿಡಿ ಬುದ್ಧಿ, ನಿಮಗೆ ಸಂಶಯವಿದ್ದರೆ ?

**ಬೈಚಪ್ಪ**— ಎಂಥ ಮಾತು ಸಿಂಗಯ್ಯ ! ದೇವರು ನಿನಗೆ ಕಲ್ಯಾಣ ಮಾಡಲಿ. ( ಸಿಳ್ಳು ಹೊಡೆಯುತ್ತ ಸಿಂಗಯ್ಯನು ಮಾಯವಾಗುವನು. ) ಹೂಂ ! ಕೆಲಸವಂತೂ ಆಯಿತು.

**ಕುಮಾರರಾಮು**— ನಮಸ್ಕರಿಸುವೆ ಜೈಚಪ್ಪನವರೆ ?

**ಜೈಚಪ್ಪ**— ಓ ಕುಮಾರರಾಮು ! ಅಂತೂ ಸರಿಯಾದ ಹೊತ್ತಿಗೆ ಬಂದಿರುವಿಯಲ್ಲ. ಯಾರಿಗೂ ಗೊತ್ತಿಲ್ಲವಂತೆ ಎಲ್ಲರೂ ಬಂದರೆ ?

**ಕುಮಾರರಾಮು**— ಯಾರಿಗೂ ತಿಳಿಯದು. ನಾವೆಲ್ಲರೂ ಕೂಡಿ ಸಿಂಗಯ್ಯನು ಅತ್ತ ಕಡೆ ಹೋಗುವ ದಾರಿಯನ್ನು ಕಾಯುತ್ತಿದ್ದೆವು.

**ಜೈಚಪ್ಪ**— ಯಾರು ಯಾರು ಬಂದಿರುವರು ?

**ಕುಮಾರರಾಮು**— ದೇವಿಸೆಟ್ಟಿಯ ಲಿಂಗ, ಕೊಳ್ಳಿಯ ನಾಗಣ್ಣ, ಭಾವಸಂಗಮ, ಗುಜ್ಜಲಜಬಿ, ಪೋಟಗಾರ ದೀವ, ಮಾದಿಗ ಹಂಪ, ಪವಳಕಾರ ಹನುಮ, ಲಿಂಗ ಕಾಟಣ್ಣ, ಮಲ್ಲನಾಯಕ, ಮುಮ್ಮಡಿ ಸಿಂಗ ಎಲ್ಲ ಹನ್ನೆರಡು ಜನ ಬಂದಿರುವೆವು.

**ಜೈಚಪ್ಪ**— ಗಟ್ಟಿ ಜನವೆಲ್ಲವೂ ನಿನ್ನ ಸಂಗಡ ಇದೆ.

**ಕುಮಾರರಾಮು**— ನಾವೆಲ್ಲರೂ ಕೂಡಿ ಆ ನೆಲಮನೆಯಲ್ಲಿ ಇರುತ್ತೇವೆ. ಯಾರಿಗೂ ಗೊತ್ತಾಗದಂತೆ ವಾಸಿಸುತ್ತೇವೆ. ಆದರೆ........?

**ಜೈಚಪ್ಪ**— ಏನು ಸಂಶಯ ಬಂದಿತು ?

**ಕುಮಾರರಾಮು**— ಇವರೆಲ್ಲರೂ ಎಲ್ಲಿ ಇರುವರೆಂದು ಕಂಪಿಲರಾಯ ಕೇಳಿದರೆ ?

**ಜೈಚಪ್ಪ**— ಅದಕ್ಕೂ ನನ್ನ ಉತ್ತರ ಸಿದ್ಧವಾಗಿದೆ. ನಿನ್ನನ್ನು ಕೊಂದು ತಿರುಗಿ ಬರುವಾಗ ಅವರೆಲ್ಲರೂ ನನ್ನನ್ನು ಅಡ್ಡಗಟ್ಟಿದರು. ಆದ್ದರಿಂದ ಇವರೆಲ್ಲರನ್ನು ಕೊಂದುಹಾಕಿದೆ ಎಂದು ಹೇಳುವೆ.

**ಕುಮಾರರಾಮು**—ಓಹೋ ! ಚನ್ನಾಯಿತು. ಜಟ್ಟಂಗಿ ರಾಮೇಶ ನಮ್ಮನ್ನು ಕಾಪಾಡುವನು. ಇನ್ನು ನಾನು ಅವರೆಲ್ಲರನ್ನೂ ಕರೆದುಕೊಂಡು ಕೆಳಗಿನ ಮನೆಗೆ ಹೋಗಲೇ ?

**ಜೈಚಪ್ಪ**— ನಿನ್ನನ್ನು ಅಗಲಲು ನನಗೆ ಬಹಳ ದುಃಖವಾಗುತ್ತದೆ. ದೇವರ ಇಚ್ಛೆ. ನಿನ್ನ ಸ್ವಭಾವದಲ್ಲಿ, ನಿನ್ನ ಮಾತುಗಳಲ್ಲಿ ನನಗೆ ಸಂಪೂರ್ಣ ವಿಶ್ವಾಸ ಇದೆಯೆಂದೇ ಈ ಆಟ ಹೂಡಿರುವೆ.

**ಕುಮಾರರಾಮು**— ನಾನು ಪರಸ್ತ್ರೀಯರನ್ನು ಕಣ್ಣೆತ್ತಿ ಸಹ ನೋಡುವದಿಲ್ಲ ವೆಂದು ಎಂದಿನಿಂದಲೋ ಪ್ರತಿಜ್ಞೆ ಮಾಡಿದ್ದೇನೆ. ಮಂತ್ರಿಗಳೇ ನನ್ನ ತಾಯಿ ಹರಿಯಮ್ಮನನ್ನು ಕೇಳಿ ಬೇಕಾದರೆ.

**ಬೈಚಪ್ಪ**— ಇವೆಲ್ಲ ನನಗೆ ತಿಳಿಯದ ಸಂಗತಿಗಳೇ ?

**ಕುಮಾರರಾಮು**— ಮಂತ್ರಿಗಳೇ, ನಿಮಗೆ ಇನ್ನೊಂದು ಸಂಗತಿ ಹೇಳಬೇಕೆನ್ನುವೆ. ನಾನು ಸತ್ತ ಸುದ್ದಿಯನ್ನು ಕೇಳಿ ನನ್ನ ರಾಣಿಯರು ಚಿತೆ ಹೋಗಬಹುದು. ಅವರನ್ನು ಕಾಪಾಡುವ ಹೊಣೆ ನಿಮ್ಮದು.

**ಬೈಚಪ್ಪ**— ನಾನು ಎಲ್ಲವನ್ನೂ ನೋಡಿಕೊಳ್ಳುತ್ತೇನೆ ಕುಮಾರರಾಮು, ನೀನು ಚಿಂತಿಸಬೇಡ. ಕಂಪಿಲರಾಯ ರತ್ನಾಜಿಯವರಿಗೆ ಪಶ್ಚಾತ್ತಾಪ ವಾಗುವಂತೆ ಮಾಡುವೆ.

**ಕುಮಾರರಾಮು**— ಹಾಗೆಲ್ಲ ಮಾಡಬೇಡಿ. ಅವರ ಸುಖ—ನನ್ನ ಸುಖ. ಅವರ ಸುಖಕ್ಕಾಗಿಯಲ್ಲವೇ, ನಾನು ಈಗ ದುಃಖಪಡುತ್ತಿರುವದು ?

**ಬೈಚಪ್ಪ**— ಕುಮಾರರಾಮು, ಎಂಥ ಮುತ್ತಿನಂತಹ ಮಾತು ಆಡಿದೆಯಲ್ಲ. ದ್ವೇಷಕ್ಕೆ ಪ್ರತಿಯಾಗಿ ಪ್ರೇಮವನ್ನು ಮುಯ್ಯ ಕೊಡುತ್ತಿರುವೆಯಲ್ಲ ನಿನ್ನಂಥ ಮಹಾಜೀವಿಗಳು ಸಿಗುವದು ದುರ್ಲಭ. ನಿನ್ನ ಹೆಸರು ಅಜರಾಮರವಾಗಿ ಉಳಿಯಲಿ.

**ಕುಮಾರರಾಮು**— ನಿಮ್ಮ ಆಶೀರ್ವಾದ.

[ ಬೆಳಗಿನ ಕೋಳಿಯು ಕೂಗು ]

**ಬೈಚಪ್ಪ**— ಓ ಬೆಳಗಿನ ಭೇರಿ ಹೊಡೆಯಿತು, ಆ ಕೋಳಿ. ಇನ್ನು ಎಲ್ಲರೂ ನಡೆಯಿರಿ ಬೇಗ.

**ಕುಮಾರರಾಮು**— ಮಂತ್ರಿಗಳೇ, ನಿಮ್ಮೆಲ್ಲರ ಭೆಟ್ಟಿ ಯಾವಾಗ ?

**ಬೈಚಪ್ಪ**— ಕುಮಾರರಾಮು, ನನಗೆ ನಿಶ್ಚಿತವಾಗಿ ಅನಿಸುತ್ತದೆ. ನೀನು ಸತ್ತ ಸುದ್ದಿ ಕೇಳಿ ದಿಲ್ಲಿಯ ಸುಲ್ತಾನನು ಮಹಾ ಸೈನ್ಯದೊಂದಿಗೆ ನಮ್ಮ ದುರ್ಗದ ಮೇಲೆ ದಾಳೀ ಮಾಡಬಹುದು. ಆಗ ಸಂಕಟ ಬಂದಾಗ ನಿನ್ನನ್ನು ಕೂಗಿ ಕರೆಯುವೆ.

**ಕುಮಾರರಾಮು**— ನಿಮ್ಮ ಸೇವೆಗೆ, ನಾಡ ಸೇವೆಗೆ ನಾವೆಲ್ಲ ಸದಾ ಸಿದ್ಧರು. ನಮಸ್ಕರಿಸುವೆ

**ಬೈಚಪ್ಪ**— ಜಟ್ಟಂಗಿ ರಾಮೇಶ ನಿಮಗೆಲ್ಲರಿಗೆ ಕಲ್ಯಾಣ ಮಾಡಲಿ.

[ ಎಲ್ಲ ಜನರು ಇಳಿಯುವರು, ಬೈಚಪ್ಪ ಕುದುರೆ ಹತ್ತಿಕೊಂಡು ಹೋಗುವನು. ]

[ ಕುದುರೆಯ ನಡಿಗೆಯ ಸಪ್ಪಳ. ]

## ದೃಶ್ಯ ೫

[ ದುಃಖದಾಯಕ ಸಂಗೀತ ]

**ಕಂಪಿಲರಾಯ**— ( ದುಃಖದಿಂದ ) ಅಯ್ಯೋ ರಾಮು! ಇಲ್ಲದಂತಾದನೇ ? ಕಾಮರೂಪ ರಾಮು ! ಗಂಡುಗಲಿ ರಾಮು ! ಅಯ್ಯೋ! ಇನ್ನು ನಾನು ಆವನನ್ನು ಕಾಣೆನೆ ? ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಟ್ಟೆನು. ಕೆಟ್ಟೆ........ನಾನು ಕೆಟ್ಟೆನು... ....ಅಯ್ಯೋ! ಕುಮಾರರಾಮನ ಸಂಗಡ ನನ್ನ ಉಳಿದ ಶೂರ ಜನರೂ ನಾಶವಾದರು. ಎಂತಹ ಅಪಘಾತ ನನ್ನ ರಾಜ್ಯದಲ್ಲಿ ನಡೆಯಿತು. ಇನ್ನು ಜನರು ನನಗೆ ಏನನ್ನುವರು ? ನನ್ನ ಸೊಸೆಯಂದಿರಿಗೆ ನಾನು ಏನೆಂದು ಉತ್ತರ ಕೊಡಲಿ ?

[ ರಾಮನ ಕೀರ್ತಿಯ ಹಾಡು ದೂರದಿಂದ ಕೇಳಬರುವದು. ]

ಗಂಡನೇ ಗತಿಮುನಿ ಗಂಡನೇ ಗುರುದೈವ.
ಗಂಡನೇ ಪ್ರಾಣ ಪ್ರಾಣೇಶಾ—
ಗಂಡರಾಗಂಡ ಉದ್ದಂಡ ರಾಮನ ಬಿಟ್ಟು
ಮುಂಡೆ ಗೋಳುಂಬುವರಲ್ಲಾ !

ಓಹೋ ನನ್ನ ಸೊಸೆಯಂದಿರು ಇಲ್ಲಿಗೇ ಬಂದರೆಂದು ಕಾಣುತ್ತದೆ. ಅವರಿಗೆ ಏನು ಹೇಳಲಿ ? ? ? ( ಮತ್ತೆ ಹಾಡು ).

**ನಿವೇದಕ**— ಕುಮಾರರಾಮನ ಹೆಂಡಂದಿರಾದ ರಾಮಲಾದೇವಿ ಮತ್ತು ಉಳಿದ ನಾಲ್ವರು ಕಂಪಿಲರಾಯನ ಕಡೆಗೆ ಬರುತ್ತಿದ್ದಾರೆ. ಅವರು ಪೀತಾಂಬರಗಳನ್ನು

ಉಟ್ಟಿದ್ದಾರೆ. ನವರತ್ನಖಚಿತ ಆಭರಣಗಳನ್ನು ತೊಟ್ಟಿದ್ದಾರೆ. ಬಲಗೈಯಲ್ಲಿ ಕರ್ಪೂರಗಳನ್ನು ಹಿಡಿದಿದ್ದಾರೆ. ಎಡಗೈಯಲ್ಲಿ ನಿಂಬೇಹಣ್ಣುಗಳನ್ನು ಹಿಡಿದು ಕನ್ನಡಿ ನೋಡುತ್ತಿದ್ದಾರೆ. ಕುಮಾರರಾಮನ ಚಿತೆಯಲ್ಲಿ ಸತಿಹೋಗಲು ಎಲ್ಲರೂ ಸಿದ್ಧರಾಗಿದ್ದಾರೆ.]

[ ಮತ್ತೆ ರಾಮನ ಕೀರ್ತಿಯ ಹಾಡು; ಅಮೇಲೆ ]

**ರಾಮಲಾದೇವಿ**— ಮಾವನವರೇ, ನಮ್ಮ ಪತಿಯನ್ನು ಎಲ್ಲಿಗೆ ಕಳಿಸಿದಿರಿ?

**೧ನೆಯ ಸತಿ**— ಯಾವ ರಾಜ್ಯದ ಮೇಲೆ ದಾಳಿಮಾಡಲು ಕಳುಹಿಸಿರುವಿರಿ?

**೨ನೆಯ ಸತಿ**— ಮಲೆಯ ರಾಯರ ಹಿಡಿದುತರಲು ಕಳುಹಿಸಿರುವಿರಾ?

**೩ನೆಯ ಸತಿ**— ಬಲ್ಲಾಳರಾಜರ ಬಳಿಗೆ ಕಳುಹಿಸಿರುವಿರಾ? ಜರುಗಲ್ಲ ಪ್ರತಾಪನ ಮೇಲೆ ಕಳುಹಿಸಿರುವಿರಾ?

**೪ನೆಯ ಸತಿ**— ಗುತ್ತಿಗೆಯ ಜಗತಪ್ಪನ ಮೇಲೆ, ಹುಳಿಯೂರು ಮುದುಗೊಂಡನ ಮೇಲೆ ಕಳುಹಿಸಿರುವಿರಾ?

**ಕಂಪಿಲರಾಯ**— ಮಗುಗಳೇ, ನಿಮ್ಮ ಪ್ರಶ್ನೆಗಳಿಗೆ ನಾನು ಏನು ಉತ್ತರ ಕೊಡಲಿ? ಯಾವ ದೇಶದ ಮೇಲೆಯೂ ನಿಮ್ಮ ಕುಮಾರರಾಮ ಏರಿ ಹೋಗಿಲ್ಲ!..........ಅವನು ಈಗ ನಿಮಗಿಂತಲೂ ಮೇಲೆ ಆ ಲೋಕದಲ್ಲಿದ್ದಾನೆ.

**ರಾಮಲಾದೇವಿ**— ನಮಗೆಲ್ಲ ಗೊತ್ತಿದೆ ಮಾವನವರೇ. ಅಂಬಲಿಗೆ ಆಶೆಬಟ್ಟು ಅಮೃತಾನ್ನವನ್ನು ಚಲ್ಲಿದಂತಾಯಿತು. ರತ್ನಿಯ ಡೊಂಬಮಾತನ್ನು ಕೇಳಿ ಕುಂಭಿನೀಪತಿ ನಮ್ಮ ಪತಿಯನ್ನು ಕೆಡಿಸಿದರಲ್ಲಾ?

**೧ನೆಯ ಸತಿ**— ತಂದೆಯವರ ಒಡಲು ಉರಿಯಲಿಲ್ಲವೆ? ನಿಮಗೆ ಹೇಗೆ ಮನನ್ಸಾಯಿತು? ಕಂಬಳಿಗಾಸೆಪಟ್ಟು ದೇವಾಲಯವನ್ನೇ ಬಿಸುಡಿದಂತಾಯಿತು.

**೨ನೆಯ ಸತಿ**— ತಂದೆಯ ಮಾತುಗಳಿಗಾಗಿ ಹಿಂದಕ್ಕೆ ರಾಮನು ವನವಾಸಪಟ್ಟನು. ಆಗ ಸೀತೆಯೂ ಅವನ ಸಂಗಡ ಇದ್ದಳು. ಈಗ ನಾವೋ....!

**೩ನೆಯ ಸತಿ**— ಶಿವ ಶಿವ ! ಎಕ್ಕೆ ಬೆಳೆಯಲು ಬಾವನ್ನವನ್ನು ಕೆಡಸಿದಂತೆ ಮಾಡಿದರಲ್ಲವೆ ?

**೪ನೆಯ ಸತಿ**— ಕಟ್ಟಿಗೆಗಾಗಿ ಕಲ್ಪವೃಕ್ಷವನ್ನು ಕಡಿಸಿದರಲ್ಲವೆ? ಶಿವ ಶಿವ !

**ರಾಮುಲಾದೇವಿ**— ಮಾವನವರೇ, ನಮಗೆ ಕಿಚ್ಚನ್ನು ದಯಪಾಲಿಸಿರಿ. ಪತಿಯನ್ನು ಬಿಟ್ಟು ಇರುವದು ನಮಗೆ ಧರ್ಮವೇ ? ನಮಗೆ ಖಂಡಿತವಾಗಿಯೂ ಕಿಚ್ಚನ್ನು ಕೊಡಿರಿ.

**ಕಂಪಿಲರಾಯ**— ರಾಮುಲಾದೇವಿ, ನಿಮಗೆಲ್ಲ ನಾನು ಉತ್ತರ ಹೇಳುವದು ಸಾಧ್ಯವಿಲ್ಲ. ಬೈಚಪ್ಪಮಂತ್ರಿಗಳೇ ಈ ಎಲ್ಲಾ ಕಾರ್ಯಗಳನ್ನು ಮಾಡಿಸಿದವರು. ಅವರ ಕಡೆಗೇ ನೀವು ಹೋಗಿ.

[ರಾಮುನನ್ನು ಹೊಗಳುವ ಹಾಡು. ಸಾವಧಾನವಾಗಿ ಕಡಿಮೆಯಾಗುತ್ತ ಹೋಗುವದು.]

## ದೃಶ್ಯ ೬

[ ಸೈನಿಕರು ಉತ್ಸಾಹದಿಂದ ಕೂಗುವ ಧ್ವನಿಗಳು ]

**ನೇಮಿಖಾನ**— ಈ ಸಲ ನಮ್ಮ ದಿಲ್ಲೀ ಸುಲ್ತಾನನಿಗೆ ಜಯ ಕಟ್ಟಿಟ್ಟದ್ದು. ಕುಮಾರರಾಮು ಸತ್ತುಹೋದಮೇಲೆ ಇನ್ನು ಆ ಕುಮ್ಮಟದುರ್ಗವನ್ನು ರಕ್ಷಿಸುವವರಾರು ? ಹಿಂದಕ್ಕೆ ಈ ದಕ್ಷಿಣದವರು ನಮ್ಮನ್ನು ಅಪಮಾನ ಮಾಡಿದರಲ್ಲವೇ ? ಮಂಗಳ ಕೆಲಸಕ್ಕಾಗಿ ಬಂದಾಗ ಅಮಂಗಳ ರೀತಿಯಿಂದ ವರ್ತಿಸಿದರಲ್ಲವೆ? ನೋಡೋಣ, ಅದರ ಸೇಡು ತೀರಿಸಿಕೊಂಡೇ ಬಿಡೋಣ. ಶಾಸ್ತ್ರಿಗಳೇ, ನೂರಾವೊಂದು ಜನರನ್ನು ಕರೆಸಿದ್ದೇನೆ. ನೀವೇ ಕಾರಣಿಕ ಹೇಳಿ, ನಮಗೆ ಜಯ ಸಿಕ್ಕುವದೋ ಅಥವಾ ಇಲ್ಲವೊ?

**ಶಾಸ್ತ್ರಿ**— ನೇಮಿಖಾನಸಾಹೇಬ, ನಾವು ಶಾಸ್ತ್ರೋಕ್ತ ರೀತಿಯಿಂದ ವಿಚಾರಿಸಿದ್ದೇವೆ. ಈಗ ಪರಿಣಾಮವನ್ನು ನೋಡಲು ಎರಡು ಟಗರುಗಳನ್ನು ಮುಟ್ಟಿಸಿ ನೋಡೋಣ.

**ನೇಮಿಖಾನ**— ಹಾಗೆಯೇ ಆಗಲಿ ಶಾಸ್ತ್ರಿಗಳೇ. ಆ ಗಂಭೀರ ಟಗರಿಗೆ ನೇಮಿ ಎಂದು ನನ್ನ ಹೆಸರು ಇಡಿ. ಆ ಹೆಂಬೇಡಿಯಾದ ಟಗರಿಗೆ ರಾಮನೆಂದು ಹೆಸರನ್ನಿಡಿರಿ.

**ಶಾಸ್ತ್ರಿ**— ನಿಮ್ಮ ಆಜ್ಞೆ. ನಿಮ್ಮ ಹೆಸರಿನ ಟಗರಿಗೆ ಹೂವಿನ ದಂಡೆಸತ್ತಿಗೆ ಹಾಕುತ್ತೇವೆ, ದೇವರನ್ನು ಸ್ಮರಿಸುತ್ತೇವೆ. ಟಗರಿನ ಕಾಳಗ ಆರಂಭ ವಾಗಲಿ.

[ ಜನರು ಹುರ್ ಎಂದು ಸಪ್ಪಳ ಮಾಡುವರು. ]

**ನೇಮಿಖಾನ**— ಏನಾಯಿತು ಇದು ?

**ಶಾಸ್ತ್ರಿ**— ಓ, ರಾಮ ಟಗರೇ ಗೆದ್ದಿತೇ ?

**ನೇಮಿಖಾನ**— ಇದೇನು ಶಾಸ್ತ್ರಿಗಳೇ, ಕಾರಣಿಕದ ಅರ್ಥ ಬದಲಾಗುತ್ತಿದೆ ಯಲ್ಲ ?

**ಶಾಸ್ತ್ರಿ**— ಇನ್ನೊಮ್ಮೆ ಎರಡು ಹುಂಜಗಳನ್ನು ಬಿಟ್ಟು ನೋಡೋಣವೇ ?

**ನೇಮಿಖಾನ**— ಆದೂ ಹೀಗೆಯೇ ಆಗಬಹುದು.

**ಶಾಸ್ತ್ರಿ**— ದೇವರ ಕೃಪೆಯು ನಿಮ್ಮ ವೈರಿಗಳ ಕಡೆಗೆ ಇರುವಂತೆ ಕಾಣುತ್ತದೆ. ಆದರೂ ನೀವು ಯತ್ನಿಸಬಹುದು.

**ನೇಮಿಖಾನ**— ಈಗ ಏನು ಮಾಡಲಿ ? ಮಿರಜ ಅಮರಾವತಿ ಪಟ್ಟಣ ಗಳನ್ನು ದಾಟಿ ಕುಮ್ಮಟದುರ್ಗದ ಸಮೀಪಕ್ಕೆ ಬಂದಿದ್ದೇವೆ. ಇನ್ನು ಇಷ್ಟು ದೊಡ್ಡ ಸೈನ್ಯವನ್ನು ತಿರುಗಿ ಸುಮ್ಮನೇ ತೆಗೆದುಕೊಂಡು ಹೋಗು ವದೆ ? ಹೋದರೆ ದಿಲ್ಲಿಯ ಸುಲ್ತಾನನು ಕೋಪಗೊಳ್ಳುವನು. ಶಾಸ್ತ್ರಿ ಗಳೇ, ನೀವು ಕಾರಣಿಕ ಹೇಳಿದ್ದು ನಿಜವಾಗುತ್ತದೆಯೋ ಇಲ್ಲವೋ ನೋಡೋಣ. ಮುಂದೆ ಇಟ್ಟ ಹೆಜ್ಜೆ ತಿರುಗಿ ತೆಗೆದುಕೊಳ್ಳಲು ಸಾಧ್ಯ ವಿಲ್ಲ. ಕಂಪಿಲರಾಯನನ್ನು ಸೋಲಿಸಿಯೇ ಹಿಂದಿರುಗಿ ಬರುವದು. ಎಲ್ಲರೂ ಏಳಿರಿ, ಇಲ್ಲಿಯ ಬೀಡಾರ ಕಿತ್ತಿರಿ.

[ ಜಯ್ ದಿಲ್ಲಿ ಸುಲ್ತಾನನಿಗೆ ಜಯ್! ನಗಾರಿ, ಕಹಳೆ ಮುಂತಾದವುಗಳ ಸಪ್ಪಳ. ಕುದುರೆಗಳು ಓಡುವದು, ಜನರ ಕೂಗಾಟ ! ಜಯ್ ]

**ನಿವೇದಕ**— ಕುಮ್ಮಟದುರ್ಗಕ್ಕೆ ಮುತ್ತಿಗೆ. ಕಂಪಿಲರಾಯನ ಹೃದಯ ಭೀತಿಯಿಂದ ಕಂಪಿಸಿತು. ಪ್ರಜೆಗಳು ಬೆದರಿದರು. ಬಾದೂರಖಾನನು ಬೇಡರ ಸೈನ್ಯವನ್ನು ತೆಗೆದುಕೊಂಡು ನಡುರಾತ್ರಿಯ ಕಾಳಕತ್ತಲೆಯಲ್ಲಿ ದುರ್ಗವನ್ನು ರಕ್ಷಿಸಲು ಹೊರಬಿದ್ದನು. ನಳಿನ ಪತ್ರದೊಳಗಿನ ನೀರಿನಂತೆ ಕುಮ್ಮಟದುರ್ಗವು ತಳ ಮಳಿಸಹತ್ತಿತು.

**ಕಂಪಿಲರಾಯ**— ಕುಮಾರರಾಮನು ಬದುಕಿದ್ದರೆ ನನ್ನ ಜೀವ ಎಷ್ಟು ಶಾಂತವಾಗಿರುತ್ತಿತ್ತು! ಜನರು ಏನೂ ಭಯಗೊಳ್ಳುತ್ತಿರಲಿಲ್ಲ.

**ಬೈಚಪ್ಪ**— ರತ್ನಾಜಿಯವರಿಂದಲೇ ಕುಮಾರರಾಮ ಸತ್ತನಲ್ಲವೇ? ಈಗ ರತ್ನಾಜಿಯವರ ಕೈಯಲ್ಲಿ ಖಡ್ಗವನ್ನು ಕೊಟ್ಟು ಕುದುರೆಯನ್ನು ಏರಿಸಿ ಹೊರಗೆ ಕಳಿಸಿರಿ.

**ಕಂಪಿಲರಾಯ**— ಮಂತ್ರಿಗಳೇ, ನಿಮಗೆ ಏನೂ ಭಯವಿಲ್ಲವೇ? ಎಷ್ಟು ನನಗೆ ಅಣಕಿಸಿ ಮಾತನಾಡುವಿರಿ!

**ಬೈಚಪ್ಪ**— ಧೈರ್ಯ ಕಳೆದುಕೊಳ್ಳಬೇಡಿರಿ ಮಹಾರಾಜ. ಸುಲ್ತಾನನ ಸೈನ್ಯ ದೊಡ್ಡದಿದ್ದರೇನಾಯಿತು? ನಮ್ಮ ಕನ್ನಡ ರಾಜ್ಯದಲ್ಲಿ ಕೆಚ್ಚು ಇಲ್ಲವೆ? ಆ ವೈರಿಗಳನ್ನು ಸುಟ್ಟು ಬೂದಿಮಾಡುವ ಕಿಚ್ಚು ಇಲ್ಲವೇ? ನೀವು ಚಿಂತೆಮಾಡಬೇಡಿರಿ. ಅಂತಸ್ತಿನ ಉಪ್ಪರಿಗೆಯನ್ನು ಏರಿ ನೋಡುತ್ತಿರಿ. ಕುಮಾರರಾಮನೇ ಎದ್ದುಬಂದು ಯುದ್ಧ ಮಾಡಿದಂತೆ ತೋರಿಸುವೆ. ಈ ತುರುಕರನ್ನು ಹೆದ್ದೊರೆಯವರೆಗೂ ಓಡಿಸುವೆ.

**ನಿವೇದಕ**— ಕಂಪಿಲರಾಯ ಉಪ್ಪರಿಗೆಯ ಮೇಲೆ ಹೋದನು. ಬೈಚಪ್ಪಮಂತ್ರಿ ದುರ್ಗದಹೊರಗೆ ಹೊರಟು ಜಟ್ಟಂಗಿ ರಾಮೇಶನ ಗುಡಿಗೆ ಬಂದನು.

[ ಕುದುರೆಗಳು ನಿಂತ ಸಪ್ಪಳ. ]

**ಬೈಚಪ್ಪ**— ಏಳಯ್ಯ ರಾಯರ ಗಂಡ, ಏಳು ಚನ್ನಿಗರಾಯ, ಏಳು ರಣ ರಂಗ ಧೀರ. ನಿಮ್ಮ ತಂದೆಗೆ ದುರ್ಗವನ್ನು ರಕ್ಷಿಸುವದಕ್ಕಾಗಿ ಭಾಷೆ ಕೊಟ್ಟು ಬಂದಿರುವೆನು. ನಿನ್ನ ಆಯುಧಗಳೆಲ್ಲ ಸಜ್ಜಾಗಿವೆ, ಬೇಗ ಏಳು.

[ಕಂಪಿಲರಾಯರಿಗೆ ಜಯವಾಗಲಿ. ಒಮ್ಮೆಲೇ ಜೋರು ಸಪ್ಪಳ. ಜನರೆಲ್ಲರೂ ಹೊರಬೀಳುವರು. ಯುದ್ಧದ ಸಪ್ಪಳ. ಹಿನ್ನೆಲೆಯಲ್ಲಿ—]

**ನಿವೇದಕ**— ಎಲ್ಲ ಶೂರರೂ ನೆಲಮಾಳಿಗೆಯಿಂದ ಹೊರಬಿದ್ದರು. ಭಯಂಕರ ಕೋಲಾಹಲ ಆರಂಭ ಆಯಿತು. ಬರುತ್ತಿರುವ ಕುಮಾರರಾಮುನನ್ನು ನೋಡಿ ತುರುಕರು ತಮ್ಮ ಕಣ್ಣುಗಳನ್ನೇ ನಂಬದಾದರು. ವೈರಿಗಳು ದಿಕ್ಕಾಪಾಲಾಗಿ ಬೆದರಿ ಓಡಹತ್ತಿದರು. ಕಂಪಿಲರಾಯರಿಗೇ ಜಯವಾಯಿತು.

## ದೃಶ್ಯ ೭

[ಕಂಪಿಲರಾಯರಿಗೆ ಜಯವಾಗಲಿ! ಕಂಪಿಲರಾಯರಿಗೆ ಜಯವಾಗಲಿ! ಮಂಗಳವಾದ್ಯಗಳು; ಆನಂದದಿಂದ ಸಂಗೀತ]

**ಕಂಪಿಲರಾಯ**— ಅಹಾ! ಮಂತ್ರಿಗಳೇ, ನಿಮಗೆ ಏನು ಬಹುಮಾನವನ್ನು ಕೊಡಲಿ? ನಿಮ್ಮ ಚಾಣಾಕ್ಷತನದಿಂದ ನಮ್ಮ ದುರ್ಗವು ಸುರಕ್ಷಿತವಾಗಿ ಬದುಕಿತು. ನನ್ನ ಪ್ರೀತಿಯ ಮಗನೂ ದೊರೆತನು.

**ಕುಮಾರರಾಮ**— ಇಲ್ಲ ತಂದೆಯವರೇ, ನಿಮಗೆ ಇನ್ನೂ ನನ್ನ ಶೀಲದ ಬಗ್ಗೆ ಸಂಶಯವಿದ್ದರೆ, ಇಕೋ ನನ್ನ ಖಡ್ಗವನ್ನು ಕೊಡುತ್ತೇನೆ. ನನ್ನ ಕುತ್ತಿಗೆಯನ್ನು ಹಾರಿಸಿರಿ.

**ಕಂಪಿಲರಾಯ**— ಛಿ! ಕುಮಾರರಾಮಾ! ಎಂಥ ಮಾತುಗಳನ್ನು ಆಡುವಿ? ಬಾ ನನ್ನ ತೋಳತಕ್ಕೆಯಲ್ಲಿ ಬಾ. ನನ್ನ ತಪ್ಪಾಯಿತೆಂದು ಎಷ್ಟು ಸಲ ಹೇಳಲಿ? ನೀನು ಪರನಾರಿಯರಿಗೆ ಸೋದರ.

**ಕುಮಾರರಾಮ**— ಆಶೀರ್ವಾದ ಮಾಡಿ, ತಂದೆಯವರೇ.

**ಕಂಪಿಲರಾಯ**— ಮೃತ್ಯು ನುಂಗಿದ ತುತ್ತು ತಿರುಗಿ ಬರುವದಿಲ್ಲ. ಆದರೆ ಈ ದಿನ ಬ್ರಹ್ಮಲಿಖಿತವೂ ಬದಲಾಗಿದೆ. ಆಹಾ!!

**ಕುಮಾರರಾಮ**— ರಕ್ತದ ಕಾಯವನ್ನು ತೊಳೆದು ಉತ್ತಮ ವಜ್ರಾಂಗವನ್ನು ಮಾಡಿಸಿದಂತಾಯಿತು ಹಿಂದಕ್ಕೆ ಶ್ರೀರಾಮಚಂದ್ರನು ತಂದೆಯ ಆಜ್ಞೆಯನ್ನು ಪಾಲಿಸಲು ವನವಾಸಕ್ಕೆ ಹೋದನು.

**ಬೈಚಪ್ಪ**— ಗಂಡುಗಲಿ ಕುಮಾರರಾಮು. ನೀನು ಸೆಳೆಮನೆಯಲ್ಲಿ ವಾಸವಾಗಿದ್ದಿ. ಆಗ ರಾಮಚಂದ್ರನ ಸಂಗಡ ಸೀತೆಯೂ ಇದ್ದಳು. ಈಗ ನಿನ್ನ ಐವರೂ ಹೆಂಡಂದಿರು ನಿನ್ನ ಹಾದಿ ಕಾಯುತ್ತಿರುವರು.

**ಕಂಪಿಲರಾಯ**— ಅವರೆಲ್ಲರನ್ನೂ ಇಲ್ಲಿಗೆ ಕರೆಯಿರಿ, ಯಾರಾದರೂ ಹೋಗಿ.

**ಬೈಚಪ್ಪ**— ರತ್ನಾಜಿಯವರನ್ನು ಕರೆಯಿಸಬೇಕಲ್ಲವೆ ?

**ಕುಮಾರರಾಮು**— ಅಹುದು, ಆ ಚಿಕ್ಕಮ್ಮನನ್ನೂ ಕರೆಯಿಸಿ. ನಾನು ಏನೂ ತಿಳಿದುಕೊಳ್ಳುವದಿಲ್ಲ. ಅವಳಿಗೂ ನನ್ನನ್ನು ನೋಡಿ ಸಮಾಧಾನವಾಗಲಿ.

**ಕಂಪಿಲರಾಯ**— ಬೈಚಪ್ಪಮಂತ್ರಿಗಳೇ, ಹತ್ತುಸಾವಿರ ಹೊನ್ನನ್ನು ದಾನ ಮಾಡಿಸಿರಿ. ಮುತ್ತಿನ ನಿವಾಳಿಯನ್ನು ಚೆಲ್ಲಿರಿ ಎಲ್ಲ ಕಡೆಗೂ ಕಾಳೆಗಳು ಭೋರ್ಗರೆಯಲಿ.

[ ಕಾಳೆಗಳ ನಸ್ಸಳ. ಒಮ್ಮೆಲೇ ‘‘ರತ್ನಾಜಿಯವರ ಆತ್ಮಹತ್ಯ ” ಎಂಬ ಕೂಗು.]

**ಕಂಪಿಲರಾಯ**— ಏನು ? ಏನಾಯಿತು ? ಯಾರು ಸತ್ತವರು ?

**ರಾಮಲಾದೇವಿ**— ಅಹುದು ಮಾವನವರೇ, ರತ್ನಾಜಿಯವರು ವಿಷ ತೆಗೆದುಕೊಂಡು ಸತ್ತರಂತೆ !

**ಕುಮಾರರಾಮು**— ಚಿಕ್ಕಮ್ಮನವರು ಸತ್ತರೇ ?

**ರಾಮಲಾದೇವಿ**— ಅಹುದು. ನೀವು ತಿರುಗಿ ಬಂದ ಸುದ್ದಿಯನ್ನು ಕೇಳಿದ ಕೂಡಲೇ ಆತ್ಮಹತ್ಯ ಮಾಡಿಕೊಂಡರಂತೆ !

**ಕಂಪಿಲರಾಯ**— ಅಯ್ಯೋ ! ಈ ವಿಜಯಯಾತ್ರೆ ಅವಳ ಜೀವನದ ಯಾತ್ರೆಯನ್ನೇ ಮುಗಿಸಿತೇ ?

**ಕುಮಾರರಾಮು**— ನನ್ನ ಈ ಹೊಸ ಹುಟ್ಟು ನನ್ನ ಚಿಕ್ಕಮ್ಮನವರ ಮರಣವನ್ನು ಬೆನ್ನಟ್ಟಿ ಬಂದಿತೇ ? ಅಯ್ಯೋ !!

**ಕಂಪಿಲರಾಯ**— ಡೊಂಬರತ್ನಿ ! ರತ್ನಾಜಿ ! ಇನ್ನು ಈ ಅರಮನೆಯಲ್ಲಿ ಅವಳ ಬೆಳಕಿಲ್ಲ.

**ಬೈಚಪ್ಪ**— ಇದೇ ಪರದಾರಸೋದರ ರಾಮುನ ಬೆಳಕು, ಇದೇ ದೇವರಿಚ್ಛೆ.

# ಅಭಿಮಾನಿ

[ ಕವಿಯಿತ್ರಿ ಕಂತಿಯ ಜೀವನಚಿತ್ರವನ್ನು ನಿರೂಪಿಸುವ ನಾಟಕ. ]

ಪಾತ್ರಗಳು :

೧. ಕವಿಯಿತ್ರಿ ಕಂತಿ — ಆಸ್ಥಾನ ಕವಿಯಿತ್ರಿ
೨. ನಾಗಚಂದ್ರ — ಆಸ್ಥಾನ ಕವಿ
೩. ವಿಷ್ಣುವರ್ಧನ — ಹೊಯ್ಸಳ ರಾಜ
೪. ಮಂತ್ರಿ
೫. ದೇವಶರ್ಮ — ನಾಗಚಂದ್ರನ ಶಿಷ್ಯ
೬. ಸುಮತಿ — ದೇವಶರ್ಮನ ಹೆಂಡತಿ
೭. ಶೋಭಾವತಿ — ಕಂತಿಯ ಗೆಳತಿ

ಕಾಲ : ಸುಮಾರು ೧೨ನೆಯ ಶತಮಾನ

ಸ್ಥಳ : ಹೊಯ್ಸಳರ ರಾಜಧಾನಿ—ದೋರಸಮುದ್ರ

## ದೃಶ್ಯ ೧

[ ವಿಷ್ಣುವರ್ಧನರಾಜನ ಆಸ್ಥಾನ. ಪಂಡಿತರು, ರಸಿಕರು ಮತ್ತು ಪ್ರಮುಖರು ನಿಯೋಜಿತವಾದ ತಮ್ಮ ಸ್ಥಾನಗಳನ್ನು ಅಲಂಕರಿಸಿದ್ದಾರೆ. ಸಭಿಕರೆಲ್ಲ ರಾಜನ ಆಗಮನವನ್ನು ನಿರೀಕ್ಷಿಸುತ್ತಿರುವರು. ಕೂಡಲೇ ರಾಜನ ಬರುವಿಕೆಯ ಘೋಷಣೆ ಕೇಳಬರುವುದು. ]

**ಘೋಷಣೆ**— ಮಲೆಪರೊಳು ಗಂಡ
ಭುಜಬಲ ವೀರ ಗಂಗ
ವೀರ ಮಾರ್ತಾಂಡ
ಹೊಯ್ಸಳೇಶ್ವರ
ವಿಷ್ಣುವರ್ಧನ ಮಹಾರಾಜ ಭೋ ಪರಾಕ್ !

[ ವಿಷ್ಣುವರ್ಧನ ರಾಜರ ರೀವಿಯಲ್ಲಿ ಬಂದು, ಮಧ್ಯದಲ್ಲಿ ಇರುವ ಸಿಂಹಾಸನದಲ್ಲಿ ಆಸೀನನಾಗುವನು. ರಾಜನು ಬರುವಾಗ ಸಭಿಕರು ಎದ್ದುನಿಂತು, ತರುವಾಯ ಕುಳಿತುಕೊಳ್ಳುವರು. ಮಂತ್ರಿಯು ನರ್ತನಕ್ಕೆ ಅಪ್ಪಣೆ ಕೊಡುವನು. ಕ್ಷಣಾರ್ಧದಲ್ಲಿ ಸಭೆಯು ಆನಂದಸಾಗರದಲ್ಲಿ ಲೋಲಾಡುವುದು. ]

**ವಿಷ್ಣುವರ್ಧನ**— ಮಂತ್ರಿಗಳೇ, ಅಭಿನವಪಂಪನಾದ ನಾಗಚಂದ್ರನು ಈ ದಿನ ಯಾವ ಕಾವ್ಯವನ್ನು ಓದುವನು ?

**ಮಂತ್ರಿ**— ಮಹಾರಾಜ, ಈ ದಿನ ನಾಗಚಂದ್ರ ಯಾವ ಕಾವ್ಯವನ್ನೂ ಓದಿ ಹೇಳುವುದಿಲ್ಲ.

**ವಿಷ್ಣುವರ್ಧನ**— ( ಆಶ್ಚರ್ಯದಿಂದ ) ಯಾವ ಕಾವ್ಯವನ್ನೂ ಹೇಳುವದಿಲ್ಲವೇ ? ಅದೇಕೆ ? ಬೆಳುದಿಂಗಳಂತಿರುವ ಕಾವ್ಯವನಿತೆಯನ್ನು ಸ್ವತಃ ನಾಗಚಂದ್ರನೇ ತಿರಸ್ಕರಿಸಿದನೇ ?

**ಮಂತ್ರಿ**— ಹಾಗಲ್ಲ ಮಹಾರಾಜ! ಈ ದಿನ ಕಾವ್ಯ ಹೇಳುವವಳು ……… ಬೇರೆ!

**ವಿಷ್ಣುವರ್ಧನ**— (ಅತ್ಯಾಶ್ಚರ್ಯದಿಂದ) ಕಾವ್ಯ ಹೇಳುವವಳು!! ……… ಅದೆಂಥ ಆಶ್ಚರ್ಯ! ಯಾವ ಕನ್ನಡಿತಿ ಕಬ್ಬಗಿತಿಯಾಗಿರುವಳು?

**ಮಂತ್ರಿ**—(ಹೆಂಗಸರ ಗುಂಪಿನಲ್ಲಿರುವ ಕಂತಿಯ ಕಡೆಗೆ ಬೊಟ್ಟುಮಾಡಿ) ಅಗೋ ಅಲ್ಲಿ ನಿಂತಿರುವಳು. ನಮ್ಮ ಆಸ್ಥಾನ ಮಹಾಕವಿಯಾದ, ಅಭಿನವ ಪಂಪನೆಂದು ಹೇಳಿಕೊಳ್ಳುವ ನಾಗಚಂದ್ರನಿಗಿಂತಲೂ ತಾನು ಹೆಚ್ಚಿನವಳು ಎಂಬ ಅಭಿಮಾನ ಅವಳಿಗೆ ಇದೆ.

**ವಿಷ್ಣುವರ್ಧನ**— ಹೀಗೋ! ಧಾಷ್ಟ್ಯರ್ಯ, ಸ್ವಾಭಿಮಾನ ಹೆಚ್ಚಿನವು ಮಂತ್ರಿಗಳೇ. ಆಗಲಿ, ಅವಳಿಂದಲೆ ಕಾವ್ಯವಾಚನವಾಗಲಿ. ಕವನದ ಸಾಲುಗಳು ನನ್ನ ಕಿವಿಯ ಮೇಲೆ ಬಿದ್ದರೆ ನಾಕು! ಹೃದಯಕ್ಕೆ ಆನಂದ ಉಕ್ಕೇರುವುದು. ನಾಗಚಂದ್ರನೇ ಅವಳ ಕಾವ್ಯಶಕ್ತಿಯನ್ನು ಪರೀಕ್ಷಿಸಲಿ.

**ಮಂತ್ರಿ**— ಅಪ್ಪಣೆ ಮಹಾರಾಜ! (ನಾಗಚಂದ್ರನ ಕಡೆಗೆ ಬೊಟ್ಟುಮಾಡಿ) ಕಾವ್ಯಪರೀಕ್ಷೆ ನಾಗಲಿ.

**ನಾಗಚಂದ್ರ**— (ಗಂಭೀರವಾಗಿ ಎದ್ದುನಿಂತು ಕಂತಿಗೆ) ನೀನು ಶ್ರೇಷ್ಠ ಕವಿಯಿತ್ರಿ ಎಂದು ಹೇಳಿಕೊಳ್ಳುವಿಯಷ್ಟೇ? ಹಾಗಾದರೆ ಯಾವುದೇ ವಿಷಯವನ್ನು ಕೊಟ್ಟರೆ ಒಂದೇ ಒಂದು ಚಣದಲ್ಲಿ ಚಿಕ್ಕ ಕವನ ರಚಿಸಬಲ್ಲೆಯಾ?

**ಕಂತಿ**— ಅವಶ್ಯವಾಗಿ! ಆ ಸಾಮರ್ಥ್ಯವಿದೆಯೆಂದೆ ಈ ದಿನ ಈ ಮಹಾಸಭೆಯಲ್ಲಿ ನಿಮ್ಮೆದುರು ನಿಂತಿರುವೆ. ನಿಮಗೆ ಬೇಕಾದ ಪ್ರಶ್ನೆ ಕೇಳಬಹುದು.

**ನಾಗಚಂದ್ರ**— ನಿನ್ನ ಕುಲ ಯಾವುದು?

**ಕಂತಿ**— ಕುಲದ ಮಾತು ಮೊದಲಿಗೆ ಏಕೆ? ನಿಮ್ಮಂತೆಯೇ ನನ್ನ ಕುಲ. ನನ್ನದೂ ಕವಿಕುಲ!!

**ನಾಗಚಂದ್ರ**— ಓಹೋ! ಹೀಗೋ! ನಿನ್ನ ಅಭಿಮಾನ ಈಗಳೇ ಹೆಚ್ಚಿನದಾಗಿದೆ. ಆದರೆ ನಾನು ಕೇಳುವುದು ಬೇರೆ ಕುಲ.

**ಕಂತಿ**— ಅದೂ ನಿಮ್ಮಂತೆಯೆ. ದಯೆ, ಅಹಿಂಸೆಗಳಿಗೆ ಹೆಸರಾದ ಶ್ರೇಷ್ಠವಾದ ಕುಲ ಜೈನ ಕುಲ !

**ನಾಗಚಂದ್ರ**— ಅವರಲ್ಲಿ ನಿನಗೆ ಸಂಪೂರ್ಣ ಶ್ರದ್ಧೆಯುಂಟೆ ?

**ಕಂತಿ**— ಉಂಟು.

**ನಾಗಚಂದ್ರ**—ಹಾಗಾದರೆ ನಾನೊಂದು ಸಮಸ್ಯೆಯನ್ನು ಕೊಡುವೆ ಅದನ್ನು ಪೂರ್ತಿಗೊಳಿಸಿ ಕವನದಲ್ಲಿ ಹೇಳುವಿಯಾ ?

**ಕಂತಿ**— ಬೇಕಾದಹಾಗೆ ಕೇಳಬಹುದು.

**ನಾಗಚಂದ್ರ**— "ದನವಂ ಕಡಿಕಡಿದು ಬಸದಿಗೆಳೆಯುತ್ತಿರ್ದರ್" ಇದರ ಮೇಲಿನ ಮೂರು ನಾಲು ಹೇಳು, ನೋಡೋಣ.

**ಮಂತ್ರಿ**— ಕವಿರಾಜ, ಜೈನರು ಎಂದಾದರೂ ಹಿಂಸೆ ಮಾಡುವರೇ ? ದನಗಳನ್ನು ಕಡಿಕಡಿದು ಬಸದಿಗೆ ಒಯ್ಯುವುದು ಸಾಧ್ಯವೇ ? ನಿಮ್ಮ ಮಾತು ಧರ್ಮದ ಬೇರನ್ನೇ ಕಿತ್ತಿ ಒಗೆದಂತೆ ಆಗುವದು.

**ನಾಗಚಂದ್ರ**— ಮಂತ್ರಿಗಳೇ, ಜಾಣ್ಮೆಯನ್ನು ಪರೀಕ್ಷಿಸಲೆಂದೇ ನಾನು ಈ ಸಮಸ್ಯೆಯನ್ನು ಕೊಟ್ಟಿರುವೆನು.

**ಕಂತಿ**— ಮಂತ್ರಿಗಳೇ, ಈ ಸಮಸ್ಯೆಗೆ ಉತ್ತರವನ್ನು ನಾನೇ ಹೇಳುವೆನು. ಕೇಳುವ ಕೃಪೆಯಾಗಬೇಕು—

ವನದೊಳಗೆ ಪುಟ್ಟಿ ಬೆಳೆಯುತೆ
ತನಿಗಂಪಂ ಪೆತ್ತು ದೆಸೆಗೆ ಬೀರುತ್ತಿರ್ದಾ ।
ಘನತರ ಸುರುಚಿರ ಸಚ್ಚಂ-
ದನವಂ ಕಡಿಕಡಿದು ಬಸಿದಿಗೆಳೆಯುತ್ತಿರ್ದರ್ ॥

**ಮಂತ್ರಿ**— ( ಆನಂದದಿಂದ ) "ಚಂದನವನ್ನೇ ಕಡಿಕಡಿದು !" ಭೇಷ್ ! ಒಳ್ಳೇ ಉತ್ತರ !

**ವಿಷ್ಣುವರ್ಧನ**— ಒಳ್ಳೇ ಕಾವ್ಯ ! ಜೈನಧರ್ಮದ ತಿರುಳಿಗೆ ಸರಿಯಾಗಿದೆ. ಕವಿರಾಜ, ಈ ಕಬ್ಬಿಗಿತಿಗೆ ಇನ್ನೂ ಒಂದು ಕಠಿಣ ಸಮಸ್ಯೆ ಕೇಳಿರಿ ಉತ್ತಮವಾದ ಉತ್ತರ ಬರುವದೇನೋ ನೋಡೋಣ.

**ನಾಗಚಂದ್ರ**— ಅಪ್ಪಣೆ ಮಹಾಪ್ರಭು! ( ವಿಚಾರಿಸಿ ಕಂತಿಗೆ ) "ಹರವಿ" ತೀರ ಸಾಮಾನ್ಯ ಶಬ್ದ. ಈ ಸಾಮಾನ್ಯ ಶಬ್ದಕ್ಕೆ ಅರ್ಥವಾಗುವಂತೆ ಒಂದು ಕಂದಪದ್ಯ ಹೇಳುವಿಯಾ ?

**ಕಂತಿ**— ( ಮುಗುಳುನಗೆ ನಕ್ಕು ) ಅದರಲ್ಲೇನು ? ಒಂದು ನಿಮಿಷದಲ್ಲಿ ಹೇಳ ಬಹುದು—

ಕಡೆದೊಡೆಯಲ್ ಹರನಾಮಂ
ನಡುದೊಡೆಯಲ್ ಹವಿಯನಾಮಂ ಆದ್ಯಕ್ಷರಮಂ।
ತೊಡೆಯಲ್ಕೆ ರವಿಯ ನಾಮಂ
ಕಡೆಯಿಂದೋದಲ್ಕೆ ವಿರಹ ಕೇಳೆಲೆ ಮಂಪಾ ॥

**ಮಂತ್ರಿ**— ಎಷ್ಟು ಬೇಗನೇ ಕಾವ್ಯಲಹರಿ ಬಂದಿತು? ಕವಿರಾಜ, ಈ ಕವನದ ಅರ್ಥವಾದರೂ ಏನು ?

**ನಾಗಚಂದ್ರ**— ಹರವಿ ಶಬ್ದದಲ್ಲಿ ಕೊನೆಯದನ್ನು ತೆಗೆದರೆ, ದೇವರ ಹೆಸರು—ಹರ ! ನಡುವಿನ ಅಕ್ಷರ ತೆಗೆದರೆ ತುಪ್ಪ—ಹವಿ ! ಮೊದಲನೆಯ ಅಕ್ಷರ ತೆಗೆದರೆ ಸೂರ್ಯ—ರವಿ ! ಕಡೆಯಿಂದ ತಿರುವಿ ಓದಿದರೆ.........ವಿರಹ !

**ಮಂತ್ರಿ**— ಓಹೋ ! ( ಆನಂದದಿಂದ ಮೆಚ್ಚಿ ) ಎಂಥ ಜಾಣ್ಮೆ!!

**ವಿಷ್ಣುವರ್ಧನ**— ನಮ್ಮ ನೃಪತುಂಗ ರಾಜಕವಿ ಹೇಳಿದಂತೆ ನಮ್ಮ ಕನ್ನಡ ಜನರು ನಿಜವಾಗಿಯೂ ಆಶುಕವಿಗಳು. ಕುರಿತು ಓದದೆಯೂ ಕಾವ್ಯ ಪ್ರಯೋಗ ಪರಿಣತಮತಿಗಳು....ಮಂತ್ರಿಗಳೇ, ಈ ಆಶುಕವಿಯಿತ್ರಿಯ ಹೆಸರು ಏನು ?

**ಕಂತಿ**— ( ತಾನಾಗಿಯೆ ದಿಟ್ಟತನದಿಂದ ) ಮಹಾಪ್ರಭು, ನನ್ನ ಹೆಸರು ಕಂತಿ !

**ವಿಷ್ಣುವರ್ಧನ**— ಮಂತ್ರಿಗಳೇ, ಇವಳು ಪ್ರತಿಭಾಶಾಲಿನಿಯೆಂಬ ಮಾತು ಸ್ಪಷ್ಟವಿದೆ. ಇವಳು ಕನ್ನಡ ಸಾಹಿತ್ಯದ ಅಂಗಣದಲ್ಲಿ ನಕ್ಷತ್ರ, ಅಲ್ಲ—ಚಂದ್ರನಂತೆ ಇರುವಳು. ನಾಗಚಂದ್ರನಂತೆ ಇವಳೂ ನಮ್ಮ ಆಸ್ಥಾನ ಕವಿಯಿತ್ರಿಯಾಗಲಿ. ಅವಳಿಗೆ ಎಲ್ಲ ರೀತಿಯಿಂದಲೂ ಮಾನಮರ್ಯಾದೆ ಸಲ್ಲಿಸಿರಿ.

[ ಎಲ್ಲರೂ 'ವಿಷ್ಣುವರ್ಧನ ಮಹಾಪ್ರಭುಗಳಿಗೆ ಜಯವಾಗಲಿ' ಎಂದು ಘೋಷಿಸುವರು. ಒಂದು ಬೆಳ್ಳಿಯ ತಟ್ಟೆಯಲ್ಲಿ ರಾಜಮರ್ಯಾದೆಯ ಆಭರಣ ಮತ್ತು ವಸ್ತ್ರಗಳನ್ನು ಒಬ್ಬ ಸೇವಕಿಯು ತಂದು ಕಂತಿಗೆ ಕೊಡುವಳು. ಕಂತಿಯು ಆನಂದದಿಂದ ಅವುಗಳನ್ನು ಸ್ವೀಕರಿಸುವಳು. ನಾಗಚಂದ್ರ ತನ್ನ ಪ್ರತಿಸ್ಪರ್ಧಿಯನ್ನು ನಿರೀಕ್ಷಿಸುವನು. ]

**ಮಂತ್ರಿ**— ನಮ್ಮ ವಿದ್ವನ್ಮಣಿಗಳ ಆಸ್ಥಾನದಲ್ಲಿ ಈ ದಿನದಿಂದ ಕವಯಿತ್ರಿ ಕಂತಿ ಬರುವುದು ನಮಗೆಲ್ಲ ಹೆಮ್ಮೆಯ ಮಾತು. ನಮ್ಮನ್ನಾಳುವ ಮಹಾಪ್ರಭುಗಳು ಎಲ್ಲ ಧರ್ಮಗಳಿಗೂ ಸರಿಸಮಾನ ಆಶ್ರಯ ಕೊಟ್ಟಂತೆ ಕವಿ ಕವಯಿತ್ರಿಯರಿಗೆ ಸಮಾನ ಆಶ್ರಯ ಕೊಡುತ್ತಿರುವುದು ಒಂದು ಮಹತ್ವದ ಘಟನೆ. ಕಂತಿ ಮಹಾಕವಯಿತ್ರಿಯಾಗಿ ಚಿರಾಯುವಾಗಿ ಬೆಳಗಲಿ.

( ಮಂಗಳ ವಾದ್ಯಗಳ ಮಧ್ಯದಲ್ಲಿ ಸಭಿಕರೆಲ್ಲ ಕಂತಿಯನ್ನು ಹೊಗಳುತ್ತ ಸಾಗುವರು.)

## ದೃಶ್ಯ ೨

[ ಸಭೆಯು ಮುಗಿದ ಮೇಲೆ ಸಭಾಗೃಹದಲ್ಲಿ ಹೊರಮಗ್ಗುಲಲ್ಲಿ ನಾಗಚಂದ್ರ ಚಿಂತಾಕ್ರಾಂತನಾಗಿ ನಿಂತಿರುವನು. ಅವನ ಶಿಷ್ಯ ದೇವಶರ್ಮ ಬಹಳ ಸಂತೋಷದಿಂದ ಮಾತನಾಡುತ್ತಿರುವನು. ]

**ದೇವಶರ್ಮ**— ( ಹಾವಭಾವಯುಕ್ತವಾಗಿ ) ದನವಂ ಕಡಿಕಡಿದು............ ಚಂದನವಂ ಕಡಿಕಡಿದು........ಹಾ! ಹಾ!........ದನವಂ ಕಡಿ........

**ನಾಗಚಂದ್ರ**— ಏ ದನವೇ! ಅದನ್ನೇ ಏನು ಮತ್ತೆ ಮತ್ತೆ ಹೇಳುವೆ? ನಿನಗೂ ಆ ಸಾಲುಗಳದೇ ಹುಚ್ಚೇ?

**ದೇವಶರ್ಮ**— ಕವಿರಾಜ, ನಿಮ್ಮ ಸಮಸ್ಯೆಗೆ ಅವಳು ಎಷ್ಟು ಸುಂದರ ಉತ್ತರ ಕೊಟ್ಟಳು. ಆಹಾ! ಎಷ್ಟು ಧಿಟ್ಟಳು! ಏನು ಅವಳ ನಿಲುವಿಕೆ! ಏನು ಅವಳ ಗಾಂಭೀರ್ಯ! ಏನು ಅವಳ ಕೋಗಿಲೆಯ ಕಂಠ!!

ಆಹಾ!............ ( ಸ್ಮರಿಸುತ್ತ ) ಹರವಿ! ವಿರಹ!! ವಿರಹ ಕೇಳಲಿ ಪಂಪಾ.

**ನಾಗಚಂದ್ರ**— ದೇವಶರ್ಮ, ಮತ್ತೆ ಮತ್ತೆ ಆ ಮಾತು ಹೇಳಬೇಡ.

**ದೇವಶರ್ಮ**— ಕವಿರಾಜ, ಏನು ದುಃಖದಲ್ಲಿರುವಿರಿ? ವಿರಹ ಎಂದಕೂಡಲೇ ಹೀಗೇಕೆ ಮಾಡುವಿರಿ? ಆ ಮಹಾ ಕವಿಯಿತ್ರಿ ದೂರ ಹೋದಕೂಡಲೇ ನಿಮಗೆ ಈಗಾಗಳೇ ವಿರಹವಾಯಿತೇ?

**ನಾಗಚಂದ್ರ**— ಏನು ನುಡಿದೆ ದೇವಶರ್ಮ? ನೀನು ಅವಳನ್ನು ಮಹಾ ಕವಿಯಿತ್ರಿ ಎಂದು ಒಮ್ಮೆಲೇ ಅಂದುಬಿಟ್ಟೆಯಾ? ಅವಳು ಒಂದು ದಿನ ದಲ್ಲಿ ನನ್ನ ಸರಿಸಮಾನಳು ಆದಳೇ?

**ದೇವಶರ್ಮ**— ಕವಿರಾಜ, ಇಷ್ಟು ದಿನ ನಿಮ್ಮ ಜೊತೆಗೆ ಓಡಾಡುತ್ತಿದ್ದೇನೆ. ನಿಮ್ಮ ಪಾದಸೇವೆಯನ್ನು ಮಾಡುತ್ತಿದ್ದೇನೆ. ನಿಮ್ಮ ಕವಿತೆ ಬರೆದು ಕೊಡುತ್ತಿದ್ದೇನೆ. ಆದರೂ ನನಗೆ ಕವಿತ್ವ ಬರಲಿಲ್ಲ. ಆದರೆ ಎಲ್ಲಿಂ ದಲೋ ಬಂದ ಇವಳು, ಈ ಕಂತಿ, ಒಂದು ಕ್ಷಣದಲ್ಲಿ ಮಿಂಚಿನಂತೆ ಸುಳಿದು, ಆಸ್ಥಾನದಲ್ಲಿ ನಲಿದು, ರಾಜನ ಮರ್ಯಾದೆ ದೊರಕಿಸಿದ ಳಲ್ಲಾ!............ನನ್ನ ಪಾಡು ಎಂಥದು?........... ಕವಿರಾಜ, ಇನ್ನು ಹಗಲು ರಾತ್ರಿ, ರಾತ್ರಿ ಹಗಲು ನಿಮ್ಮ ಪಾದದ ಬಳಿ ಕುಳಿತುಬಿಡು ತ್ತೇನೆ. ನನಗೂ ರಾಜಮರ್ಯಾದೆ ಸಿಗುವಂತೆ ಮಾಡಿರಿ. ಆ ಮಹಾ ಕವಿಯಿತ್ರಿ ಕಂತಿ............

**ನಾಗಚಂದ್ರ**— ( ನಡುವೆ ಬಾಯಿಹಾಕಿ ) ಬಾಯಿಮುಚ್ಚು ದೇವಶರ್ಮ! ನಿನ್ನದೂ ಒಂದು ದೊಡ್ಡ ಸಮಸ್ಯೆ.

**ದೇವಶರ್ಮ**— ಈ ಸಮಸ್ಯೆಯನ್ನು ಆ ಮಹಾಕವಿಯಿತ್ರಿ ಕಂತಿಗೆ ಕೇಳಿರಿ.

**ನಾಗಚಂದ್ರ**— ಮಹಾಕವಿಯಿತ್ರಿ ಕಂತಿ!!.........( ಅಣಕದಿಂದ ) ಕೇಳು ತ್ತೇನೆ!.........ಹೋಗು ದೇವಶರ್ಮ, ಮನೆಗೆ ಹೋಗು ಈಗ. ಸದ್ಯ ಯಾರದಾದರೂ ಪಾದಸೇವೆ ಮಾಡು.

[ ದೇವಶರ್ಮ ಅಂಜುತ್ತ ಹೋಗುವಾಗ "ಮನೆಯಲ್ಲಿ ಯಾರದು? ಹೆಂಡತಿಯದೇ?" ಎಂದು ಹೋಗುವನು. ನಾಗಚಂದ್ರ ನಿಂತ ಸ್ಥಳದಲ್ಲಿಯೇ ನಿಂತಿರುವನು.]

**ನಾಗಚಂದ್ರ**— ( ಚಿಂತೆಯಿಂದ ) ಈ ದಿನ ನನ್ನದು ಸೋಲೆ ? ಜಯವೆ ? ಸ್ತ್ರೀಯ ಬುದ್ಧಿ ಮೊಣಕಾಲ್ ಕೆಳಗೆ ಎನ್ನುವರು. ಅಂಥವಳು ಈ ದಿನ ನನ್ನ ಸರಿಸಮಾನಳು. ಅಯ್ಯೋ ! ಆದಿಕವಿ ಪಂಪನ ಸಾಲಿನಲ್ಲಿ ಮೆರೆಯ ಬೇಕೆಂಬ ನನ್ನ ಮಹತ್ವಾಕಾಂಕ್ಷೆ! ಈ ದಿನ ಏನಾಯಿತು ??? ಏನಾಯಿತು ?

**ಕಂತಿ**— ( ಪ್ರವೇಶಿಸಿ ಪಂಪನನ್ನು ನೋಡಿ ) ಏನಾಯಿತು ಕವಿಗಳೆ?

**ನಾಗಚಂದ್ರ**— ( ಒಮ್ಮೆಲೆ ಚೇತರಿಸಿ ) ಯಾರು ? ಕಂತಿ! ( ನೆನೆಯಿಸಿ ಸ್ವಲ್ಪ ಅಣಕದಿಂದ ) ಮಹಾಕವಿಯಿತ್ರಿ ಕಂತಿ ಅಲ್ಲವೇ ?

**ಕಂತಿ**— ( ಅಭಿಮಾನದಿಂದ ) ಅಹುದು ಕವಿಗಳೇ.

**ನಾಗಚಂದ್ರ**— ( ಸ್ವಗತ ) ಕವಿಗಳೇ! ರಾಜರೂ ಸಹ ನನ್ನನ್ನು ಕವಿರಾಜನೆಂದು ಕರೆಯುವರು. ( ಪ್ರಕಟವಾಗಿ ) ಕಂತೀ, ಸ್ತ್ರೀಗೆ ಇಂಥ ಅಹಂಕಾರ ಶೋಭಿಸುವುದೇ ?

**ಕಂತಿ**— ಇದೇನು? ಒಮ್ಮೆಲೆ ಮಾತು ಬದಲಿಸಿದಿರಲ್ಲಾ ? ಸ್ತ್ರೀ ಅಹಂಕಾರವಿಲ್ಲದೇ ಎಂದೂ ಮುಂದೆ ಬರಲಾರಳು.

**ನಾಗಚಂದ್ರ**— ಅಹುದು. ಇಂದಿನ ಸಭೆಯಲ್ಲಿಯೇ ನನಗೆ ಅದು ತಿಳಿಯಿತು. ರಾಜರು ನನ್ನಂತೆ ನಿನಗೂ ಇಷ್ಟು ಸಕಲ ಮರ್ಯಾದೆ ಮಾಡಿದ್ದರಿಂದಲೇ ನಿನಗೆ ಬಹಳ ಅಭಿಮಾನ ಹೀಗೆ ಬಂದಿರುವದಲ್ಲವೇ ?

**ಕಂತಿ**— ಹಾಗಲ್ಲ ಕವಿಗಳೇ. ಸ್ತ್ರೀಯರಿಗೆ ನಮ್ಮ ನಾಡಿನ, ನಮ್ಮ ಕಾವ್ಯದ, ನಮ್ಮ ಕಲೆಯ ಮಮತೆ ಬೇಡವೇ ?

**ನಾಗಚಂದ್ರ**— ಅಹುದು ! ಅಹುದು ! ಹಾಗಾದರೆ ನನ್ನ ಕವಿತೆಯ ಅಭಿಮಾನ ನಿನಗೆ ಇದೆಯೇ ?

**ಕಂತಿ**— ( ಮುಗುಳುನಗೆ ನಕ್ಕು ) ಏನೆಂದಿರಿ ?

**ನಾಗಚಂದ್ರ**— ನನ್ನ ಕವಿತೆಯ ಅಭಿಮಾನ ನಿನಗೆ ಇರುವುದೇ ? ನನ್ನ ಕಾವ್ಯ ಓದಿರುವೆಯಾ ? ನನ್ನ ಕವಿತ್ವ ನಿನಗೆ ಹೇಗೆ ಅನಿಸುವುದು ?

**ಕಂತಿ**— ( ಕುಚೇಷ್ಟೆಯ ಮುಗುಳುನಗೆಯಿಂದ ) ನಿಮ್ಮ ಕಾವ್ಯಗಳನ್ನು ಓದಿರುವೆ, ಕವಿಗಳೇ. ನೀವು ಆಸ್ಥಾನ ಕವಿಗಳು. ನಿಮ್ಮ ಕಾವ್ಯ ಓದದೆ ಬದುಕುವುದಾದರೂ ಹೇಗೆ?

**ನಾಗಚಂದ್ರ**— ( ಆನಂದದಿಂದ ) ಹಾಗಾದರೆ ನನ್ನ ಗ್ರಂಥಗಳನ್ನೆಲ್ಲ ಮೆಚ್ಚಿರುವಿಯಷ್ಟೇ ?

**ಕಂತಿ**— ( ಸ್ವಗತ ) ಒಮ್ಮೆಲೇ ಮೆಚ್ಚುಗೆಯ ಮಾತನ್ನು ಆಡಿದರು!........ ಇರಲಿ ! ಪರೀಕ್ಷೆ ಮಾಡಿ ನೋಡೋಣ (ಪ್ರಕಟವಾಗಿ) ನನ್ನ ಸ್ಪಷ್ಟ ಅಭಿಪ್ರಾಯವನ್ನು ಹೇಳಲೇ ?

**ನಾಗಚಂದ್ರ**— ಅಹುದು ಕಂತೀ. ಅದಕ್ಕಾಗಿಯೇ ನಾನು ಕೇಳಿದ್ದು. ನಿನ್ನ ಸ್ಪಷ್ಟ ಅಭಿಪ್ರಾಯವನ್ನೇ ಹೇಳು.

**ಕಂತಿ**— ( ಅಣಕು ನಗೆಯಿಂದ ) ನಿಮ್ಮ ಗ್ರಂಥಗಳನ್ನೆಲ್ಲ ಬಹು ಬೇಗ ಓದಿ ಮುಗಿಸಿದೆ. ವಿಷ್ಣುವರ್ಧನರಾಜರು ನಿಮಗೆ ರಾಜಕವಿ ಮರ್ಯಾದೆ ಸಲ್ಲಿಸಿದ್ದು ನಿಜ. ಆದರೆ............? ನಿಮ್ಮ ಕವಿತ್ವವೆಲ್ಲ ಮಡಕೆ, ತುಡುಕೆ, ಅಡಕೆ, ಹೊಡಕೆ........

**ನಾಗಚಂದ್ರ**—(ಕಿವಿಯ ಮೇಲೆ ಕೈಯಿಟ್ಟುಕೊಂಡು ) ಅಯ್ಯೋ, ನಾಕು ನಾಕು. ಹೆಚ್ಚಿಗೆ ಮಾತು ಬೇಡ. ಆಸ್ಥಾನ ಕವಯಿತ್ರಿಯಾದೆಯೆಂದು ನಿನಗೆ ಇಂಥ ಅಭಿಮಾನವಲ್ಲವೇ ?

**ಕಂತಿ**— ( ನಗುವಿನಿಂದ ) ಸಿಡುಕೇಕೆ ಕವಿಗಳೇ ?

**ನಾಗಚಂದ್ರ**— ಕವಿ !!........ನಾನು ಕವಿರಾಜನೂ ಅಲ್ಲವೇ ? ನಮಸ್ಕಾರ ! ಬರುತ್ತೇನೆ. ( ನಾಗಚಂದ್ರನು ಸಿಟ್ಟಿನಿಂದ ಹೋಗುವನು. )

**ಕಂತಿ**— ( ನಾಗಚಂದ್ರ ಹೋಗುವದನ್ನು ನೋಡುತ್ತ ಅವನು ಮರೆಯಾದ ಕೂಡಲೇ ) ಅಬ್ಬಾ ! ಎಂತಹ ಸಿಟ್ಟು !! ಚೇಷ್ಟೆಗಾಗಿ ನನ್ನ ಅಭಿಪ್ರಾಯ ಹೇಳಿದರೂ ಎಂತಹ ಸಿಟ್ಟು !!...........ಗಂಡಸರೇ ಹೀಗೆ ! ಇರಲಿ, ನೋಡೋಣ ! ಇವರ ಹೆಮ್ಮೆಯ ಪರೀಕ್ಷೆಯೆ ಆಗಲಿ !

## ದೃಶ್ಯ ೩

[ ದೇವಶರ್ಮನ ಮನೆಯಲ್ಲಿಯ ಕೋಣೆ. ದೇವಶರ್ಮನ ಕೈಯಲ್ಲಿ ಒಂದು ಎಣ್ಣೆಯ ಬಾಟಲಿ ಇದೆ. ಅದನ್ನು ನೋಡಿ ಅವನಿಗೆ ಆನಂದವಾಗುತ್ತಿದೆ. ದೇವಶರ್ಮನ ಹೆಂಡತಿ ಎಲೆಯಡಿಕೆ ಮೆಲ್ಲುತ್ತ ಕುಳಿತಿರುವಳು. ]

**ದೇವಶರ್ಮ**— ನಿನಗೂ ಈ ಎಣ್ಣೆಯನ್ನು ಕೊಡಬೇಕು.

**ಸುಮತಿ**— ನನಗೇನಾಗಿದೆ ? ಹೀಗೇಕೆ ಅನ್ನುವಿರಿ ?

**ದೇವಶರ್ಮ**— ತಲೆ ಬಹಳ ಮದಡಿದೆ. ಯಾವ ಸಮಸ್ಯೆಗೂ ಉತ್ತರ ಹೇಳುವದಿಲ್ಲ.

**ಸುಮತಿ**— ಉತ್ತರವನ್ನು ಏನು ಹೇಳುವುದು ! ನಿಮಗೆ ಈ ಎಲೆಯಡಿಕೆಯ ಪಟ್ಟಿಯನ್ನು ತಯಾರಿಸಿ ಕೊಡುತ್ತೇನೆ. ಇದನ್ನು ತಿಂದು ನನ್ನನ್ನು ಬಾಯಿತುಂಬ ಹೊಗಳಿರಿ.

**ದೇವಶರ್ಮ**— ಅಲ್ಲೆ, ನನ್ನದು ಈ ಸಮಸ್ಯೆಯಲ್ಲ. ಈಗ ದನವಂ ಕಡಿ ಕಡಿದು ಬಸದಿಗೆಳೆಯುತ್ತಿರ್ದರ್........

**ಸುಮತಿ**— ಅಯ್ಯೋ ! ಎಲ್ಲಿಯ ದನ ! ಅದನ್ನು ಕಡಿಯುವುದೇ ? ಇಂಥ ಮಾತುಗಳನ್ನು ಆಡಿ, ನನ್ನ ಮನಸ್ಸನ್ನು ಕಡಿಯಬೇಡಿರಿ.

**ದೇವಶರ್ಮ**— ಅಯ್ಯೊ ! ಅದಕ್ಕೇ ನಾನು ಹೇಳುವುದು. ನಿನ್ನ ಹೆಸರೇನೋ ಸು–ಮತಿ, ಆದರೆ ಬುದ್ಧಿಯೇ ಇಲ್ಲ. ಈ ಎಣ್ಣೆಯನ್ನಾದರೂ ತಿಗೆ ದುಕೋ ಅಂದರೆ........?

**ಸುಮತಿ**— ಯಾವುದಾದರೂ, ಏನಾದರೂ ಒಂದು ಎಣ್ಣೆಯನ್ನು ಹಚ್ಚಿ ನನ್ನ ತಲೆ ಕೆಡಿಸಬೇಕೆನ್ನುವಿರಾ ?

**ದೇವಶರ್ಮ**— ಅಯ್ಯೋ ಮಹಾರಾಯಳೇ, ನಿನ್ನ ತಲೆ ಕೆಡಿಸುವ ಕೆಲಸ ವಲ್ಲ ! ಇದು ನಿನ್ನನ್ನು ಕವಯಿತ್ರಿ ಮಾಡುವುದು.

**ಸುಮತಿ**— ಏನು ಅದು ? ಎಲ್ಲರನ್ನು ಕವಿಯಿತ್ರಿ ಮಾಡಬೇಕಾದರೆ ಅದು ಎಂಥ ಎಣ್ಣೆ ಇರಬೇಕು ?

**ದೇವಶರ್ಮ**— ಇದರ ಹೆಸರು ಜ್ಯೋತಿಷ್ಮತಿ ತೈಲ. ನೀನು ಕೇಳಿಲ್ಲವೇ, ಕಂತಿ ಕವಿಯಿತ್ರಿ ಹೇಗಾದಳೆಂಬುದನ್ನು ?

**ಸುಮತಿ**— ಅವಳಿಗೂ ನಿಮ್ಮ ಗುರುಗಳಾದ ನಾಗಚಂದ್ರರಂತೆ ಆಸ್ಥಾನ ಮರ್ಯಾದೆ ದೊರೆತ ಸುದ್ದಿ ನೀವೇ ಮೊನ್ನೆ ಹೇಳಿದಿರಲ್ಲ !

**ದೇವಶರ್ಮ**— ನೋಡು, ಎಂಥ ಕೆಳಗಿನವರೂ ದೈವವಿದ್ದರೆ ದೊಡ್ಡವರಾಗ ಬಹುದೆನ್ನುವುದಕ್ಕೆ ಕಂತಿಯು ಉದಾಹರಣೆಯೆ ಸಾಕ್ಷಿ.

**ಸುಮತಿ**— ( ಆಶ್ಚರ್ಯದಿಂದ ) ಕಂತಿ ಮೊದಲು ಏನು ಇದ್ದಳು ?

**ದೇವಶರ್ಮ**— ನಮ್ಮ ಮಂತ್ರಿ ಧರ್ಮಚಂದ್ರನ ಮನೆಯಲ್ಲಿಯ ತೊತ್ತು ಅವಳು.

**ಸುಮತಿ**— ಓ ! ಅಂಥವಳು ಹೀಗಾದಳೇ ??

**ದೇವಶರ್ಮ**— ಹೂಂ ! ಇದೆಲ್ಲ ಆದುದು ಜ್ಯೋತಿಷ್ಮತಿ ತೈಲದಿಂದ.

**ಸುಮತಿ**— ಏನು, ಜ್ಯೋತಿಷ್ಮತಿ ತೈಲ ಎಂದು ಮೇಲಿಂದ ಮೇಲೆ ಹೇಳು ತ್ತಿರುವಿರಿ ? ಅದರ ಸುದ್ದಿಯಾದರೂ ಏನು ? ಸ್ಪಷ್ಟವಾಗಿ ಹೇಳಿಬಿಡಿರಿ.

**ದೇವಶರ್ಮ**— ಅದೇನು ? ಮಂದಮತಿಗಳ ಬುದ್ಧಿಶಕ್ತಿಯನ್ನು ಹೆಚ್ಚಿಸುವ ಔಷಧ. ಉತ್ತಮ ಔಷಧ ! ರಾಮಬಾಣ. ಈ ತೈಲದ ಅರ್ಧ ಬಿಂದು ವನ್ನು ಸೇವಿಸಿದರೆ ಸಾಕು, ಅವರು ಬುದ್ಧಿವಂತರಾಗುವರು.

**ಸುಮತಿ**— ( ಕುತೂಹಲದಿಂದ ) ಯಾರು ಇದನ್ನು ತಯಾರಿಸಿದವರು ?

**ದೇವಶರ್ಮ**— ಆ ಧರ್ಮಚಂದ್ರ ಮಂತ್ರಿಯ ಮಗ ! ಅವನು ಉಪಾ ಧ್ಯಾಯ. ಮಂದಬುದ್ಧಿ ಬಾಲಕರ ಬುದ್ಧಿಶಕ್ತಿ ಹೆಚ್ಚಿಸಲು ಈ ಔಷಧಿ ತಯಾರಿಸಿದ. ಅವನು ಈ ಔಷಧವನ್ನು ಕುಡಿಕೆಯಲ್ಲಿ ಹಾಕಿ ಇರಿ ಸಿದ್ದ. ಕಸಗೂಡಿಸುವ ಕಂತಿ ದಿನಾಲು ಇದನ್ನು ನೋಡುತ್ತಿದ್ದಳು.

**ಸುಮತಿ**— ಕಂತಿ ಈ ಔಷಧ ತೆಗೆದುಕೊಂಡುಬಿಟ್ಟಳೇನು ?

**ದೇವಶರ್ಮ**— ತಾಳು ಸ್ವಲ್ಪ ! ಉಪಾಧ್ಯಾಯ ಅರ್ಘ ಬಿಂದು ಜೇನುತುಪ್ಪ ದಲ್ಲಿ ಬೆರೆಯಿಸಿ ಮಕ್ಕಳಿಗೆ ಕೊಡುತ್ತಿದ್ದ. ಕಂತಿಗೆ ಇದನ್ನು ನೋಡಿ, ಬಾಯಲ್ಲಿ ನೀರೂರಿತು. ಒಂದು ಸಲ, ಮನೆಯಲ್ಲಿ ಯಾರೂ ಇಲ್ಲದಿರು ವಾಗ, ಅವಳು ಇದು ಏನೆಂಬುದು ತಿಳಿಯದೇ ಗಟಗಟನೇ ಕುಡಿದು ಬಿಟ್ಟಳು.

**ಸುಮತಿ**— ಎಲ್ಲವನ್ನೂ ??

**ದೇವಶರ್ಮ**— ಹೂಂ ! ಕುಡಿಕೆಯ ತುಂಬಾ ಇರುವ ಎಲ್ಲ ತೈಲವನ್ನೂ ಕುಡಿದುಬಿಟ್ಟಳು. ನೋಡು, ಈ ತೈಲ ಸಾಮಾನ್ಯವಲ್ಲ. ಬಹಳೀ ಕಾವು. ಆ ಕಾವಿನಿಂದ ಅವಳ ಮೈಯೆಲ್ಲ ದಾವಾಗ್ನಿಯಂತೆ ಉರಿಯ ತೊಡಗಿತು.

**ಸುಮತಿ**— ಅಯ್ಯೋ ಪಾಪ ! ಆಮೇಲೆ ಅವಳು ಏನು ಮಾಡಿದಳು ?

**ದೇವಶರ್ಮ**— ಏನು ಮಾಡಿದಳು ? ತಾಪವನ್ನು ತಾಳಲಾರದೇ ಬಾವಿ ಯಲ್ಲಿ ಹಾರಿಕೊಂಡಳು.

**ಸುಮತಿ**— ಅಲ್ಲಿಯೇ ಸತ್ತಳೇ ? ಅಯ್ಯೋ !

**ದೇವಶರ್ಮ**— ಎಂತಹ ಪೆಚ್ಚಿ ನೀನು !! ಸತ್ತಿದ್ದರೆ ಅವಳು ಇನ್ನೂ ಹೇಗೆ ಇರುತ್ತಿದ್ದಳು ?

**ಸುಮತಿ**— ಮತ್ತೆ ಏನಾಯಿತು ?

**ದೇವಶರ್ಮ**— ಬಾವಿ ಬಹಳ ಆಳವಾಗಿ ಇರಲಿಲ್ಲ. ನೀರು ಅವಳ ಕುತ್ತಿ ಗೆಯ ವರೆಗೆ ಇದ್ದವು. ಅವಳು ಬಾವಿಯಲ್ಲಿಯೇ ನಿಂತುಕೊಂಡಳು.

**ಸುಮತಿ**— ಇದೆಲ್ಲವೂ ಆ ಜಿನನ ಆಟ. ಅವನೆ ಅವಳನ್ನು ಕಾಪಾಡಿದ, ಅಲ್ಲವೇ ?

**ದೇವಶರ್ಮ**— ಕಾಪಾಡಿದ ಇಷ್ಟೇ ಅಲ್ಲ. ಅವಳನ್ನು ಮೇಲೆತ್ತಿ ಹಿಡಿದ. ತೈಲದ ಪರಿಣಾಮವಾಗಿ ಅವಳ ದೇಹದಲ್ಲಿ ಪ್ರತಿಭೆಯ ಕೋಲ್ಮಿಂಚು ಸುಳಿಯಿತು. ಅವಳು ಸುಂದರವಾದ ಕವನಗಳನ್ನು ಕಟ್ಟಿ ಹಾಡತೊಡಗಿ ದಳು. ಜನರಿಗೆಲ್ಲ ಆಶ್ಚರ್ಯವಾಯಿತು. ನಮ್ಮ ಗುರುಗಳಾದ ಆಸ್ಥಾನ

ಕವಿ ಅಭಿನವಪಂಪನವರಿಗೂ ಈ ಸುದ್ದಿ ಮುಟ್ಟಿತು. ಅವರು ಬಂದು ಬಾವಿಯ ದಂಡೆಯ ಮೇಲೆ ನಿಂತು ಸಾವಿರ ಪ್ರಶ್ನೆ ಕೇಳಿದರು. ಎಲ್ಲದಕ್ಕೂ ಅವಳು ಕವನ ಕಟ್ಟಿ ಉತ್ತರ ಹೇಳಿದಳು.

**ಸುಮತಿ**— ನೋಡಿ, ನೀವು ಈ ಸುದ್ದಿ ಹೇಳಿದ ಕೂಡಲೇ ನನಗೂ ಒಂದು ಸಂಗತಿ ಹೊಳೆಯಿತು. ಹೇಳಲೇನು ?

**ದೇವಶರ್ಮ**— ಹೇಳು ! ಹೇಳು ! ನಿನಗೂ ಅವಳಂತೆ ಏನಾದರೂ ಕವನದ ಸಾಲುಗಳು ಮಿಂಚಿನಂತೆ ಝುಕ್ಕನೆ ಹೊಳೆದುವೇ ?

**ಸುಮತಿ**— ಹೂಂ ! ನೀವು ನಿಮ್ಮ ಗುರುಗಳ ಮನೆಗೆ ಹೋಗಿ, ಅವರ ಪಾದ ಸೇವೆ ಮಾಡುವುದಕ್ಕಿಂತ, ಈ ಜ್ಯೋತಿಷ್ಮತೀ ತೈಲವನ್ನೇ ಉಪಯೋಗ ಮಾಡಿರಿ.

**ದೇವಶರ್ಮ**— ಆಯಿತು. ನನ್ನ ಬಾಣವನ್ನು ನನಗೇ ತಿರುಗಿ ಬಿಟ್ಟಿಯೇನು ? ಭಲೇ ಗಡಸುಗಾರ್ತಿ. ಗೂಗೆ ಮಾನಸ ಸರೋವರದಲ್ಲಿ ಮಿಂದರೆ ರಾಜಹಂಸ ಆಗುತ್ತದೆಯೇ ? ಅದಕ್ಕೂ ಬೇಕು, ದೈವ !

**ಸುಮತಿ**— ಹಾಗಾದರೆ ಅವಳು ಹೇಳುವ ಒಂದು ಒಗಟವನ್ನಾದರೂ ಹೇಳಿರಿ ನೋಡೋಣ.

**ದೇವಶರ್ಮ**— "ಬಿಳಿದಂ ಪೊದ್ದು, ಬಿಳಿದೊಂದುಟ್ಟು, ಬಿಳಿ ಮುತ್ತಿನ ಹಾರಮಂ ಧರಿಸಿ, ಬೆಳದಿಂಗಳೊಳ್ ಪೋಪಳು" ಈ ಒಗಟವನ್ನು ಬಿಡಿಸಿ ಉತ್ತರ ಹೇಳು ನೋಡೋಣ.

**ಸುಮತಿ**— ( ವಿಚಾರಿಸುತ್ತ ) ಬಿಳಿದಂ........ಬಿಳಿದಂ........ಛೀ........ಏನೋ ಎಂತೋ ! ಏನು ಈ ಬಿಳಿದು........?

**ದೇವಶರ್ಮ**— ಮುಖ ಬೆಳ್ಳಗೆ ಹೊಡೆಯುತ್ತದಲ್ಲೇ ? ಇಷ್ಟೂ ತಿಳಿಯೂದಿಲ್ಲವೆ ನಿನಗೆ ? ಅದಕ್ಕೇ ನಾನು ನೀನು ಈ ತೈಲ ಉಪಯೋಗಿಸು ಅಂತ ಹೇಳಿದ್ದು.

**ಸುಮತಿ**— ಸತಿಯಂತೆಯೇ ಪತಿ ! ಪತಿಯಂತೆಯೇ ಸತಿ !!........ನನಗೆ ಉತ್ತರ ಬರಲಿಲ್ಲ ಅಂದಮೇಲೆ ನಿಮಗೇನು ಬರುತ್ತದೆ ?

**ದೇವಶರ್ಮ**— ನಾನು ಅಂದರೆ ಏನೆಂದು ತಿಳಿದಿರುವಿ? ' ಅ ' ದಿಂದ ' ಜ್ಞ 'ದ ವರೆಗೆ ಕಲಿತು ಅಜ್ಞನಿದ್ದರೂ, ಮಹಾಕವಿ ಅಭಿನವ ಪಂಪನ ಶಿಷ್ಯ. ಬೇಕಾದ ಸಮಸ್ಯೆಗೆ ಉತ್ತರ ಹೇಳಬಲ್ಲೆ. ಹೇಳಲೇ ? ನೋಡು........ ( ನಕ್ಕು ) ಹೆ....ಹೆ.... ಅಗಸರ ಮಗಳೆ !.......

**ಸುಮತಿ**—( ಕನಲಿ ) ಏನು! ನನ್ನನ್ನು ಅಗಸರ ಮಗಳೆಂದು ಕರೆಯುವಿರಾ ? ದೀಪಾವಳಿಗೆ ಅಪ್ಪನ ಮನೆಗೆ ಬನ್ನಿ, ಹೇಳತೇನಿ.

**ದೇವಶರ್ಮ**— ಅಯ್ಯೋ ಮಹಾರಾಯಳೇ, ನಮಸ್ಕಾರ ! ನಿನಗೆ ಅಗಸರ ಮಗಳು ಎಂದು ಕರೆದು ನಾನು ಯಾವ ಕತ್ತೆ ಬೆನ್ನುಹತ್ತಿ ಹೋಗಲಿ?.... ನಾನು ಹೇಳಿದ್ದು ಆ ಒಗಟಿದ ಉತ್ತರ. ( ಸುಮತಿ ನಗುವಳು ) ಅಗ ಸರ ಮಗಳು—ಹೆರವರ ಬಿಳಿ ಬಟ್ಟೆ ಸ್ವಚ್ಛವಾಗಿ ಒಗೆದು ಯಾವಾಗಲೂ ಧರಿಸುವಳು. ಅದಕ್ಕೇ ಕಂತಿ ಹೇಳಿದ್ದು ಈ ಒಗಟಿದ ಉತ್ತರ !

**ಸುಮತಿ**— ಅಡ್ಡಿೀ ಇಲ್ಲ. ಚೆನ್ನಾಗಿ ಹೇಳಿದ್ದಾಳೆ. ಆಸ್ಥಾನದಲ್ಲಿ ಮತ್ತೆ ಯಾವ ಯಾವ ಪ್ರಶ್ನೆ ಕೇಳಿರುವರು ?

**ದೇವಶರ್ಮ**—ಇನ್ನೂ ಹೇಳಲೇ ? ನೋಡು, ಒಂದು ಮೋಜಿನ ಸಮಸ್ಯೆ ಇದೆ. ಹೇಳಲೇ ?

**ಸುಮತಿ**— ಹೂಂ ! ಹೂಂ ! ಬೇಗ ಹೇಳಿಬಿಡಿ.

**ದೇವಶರ್ಮ**— ಏನು ? ಹೇಳುವುದನ್ನು ಬಿಟ್ಟುಬಿಡಲೇ ? ಹ್ಞಾಂ ?

**ಸುಮತಿ**— ಅಲ್ಲಾ, ಹೇಳಿರಿ ಅಂದೆ.

**ದೇವಶರ್ಮ**— ನೀನು ನಾಚಿಕೊಳ್ಳುವದಿಲ್ಲವಷ್ಟೇ ?........ಆಗಲಿ....' ಇಲಿಯಂ ಮುರಿಮುರಿದು ತಿನ್ನುತ್ತಿರ್ಪರ್ '....

**ಸುಮತಿ**— ( ಒಮ್ಮೆಲೆ ಓಕರಿಸಿ.. ) ಅಯ್ಯೋ ಅಸಹ್ಯ........!

**ದೇವಶರ್ಮ**— ಇಲಿಯಂ ಮುರಿದು ( ಸುಮತಿ ಮತ್ತೆ ಓಕರಿಸಿ ಅಸಹ್ಯಪಟ್ಟು ಕೊಳ್ಳುವಳು ) ಇದು ಪಂಪ ಕೇಳಿದ ಸಮಸ್ಯೆ.

[ ಸುಮತಿ ಓಕರಿಸಿಕೊಂಡು ಬಾಗಿಲದತ್ತ ಬರುವಾಗ ಶೋಭಾವತಿ ಅವಳನ್ನು ಎದುರಾಗಿ ಪ್ರವೇಶಿಸುವಳು. ]

**ಶೋಭಾವತಿ**— ಇದೇನೆ ಸುಮತಿ ? ಹೀಗೇಕೆ ಓಕರಿಸುವಿ ?

**ದೇವಶರ್ಮ**— ಶೋಭಾವತಿ, ಸಮಸ್ಯೆ ಹೇಗಿದೆ ನೋಡು.

**ಶೋಭಾವತಿ**— ಸಮಸ್ಯೆ ?........ಪಾಪ!!.... ...ಸುಮತಿ, ಒಳಗೆ ನಡೆ, ಮಲಗಿಕೋ ನಡೆ.

**ಸುಮತಿ**— ಅಲ್ಲೇ ?

**ಶೋಭಾವತಿ**— ಛೀ ! ನೀನೂ ಹಾಗೆಯೇ ಮಾಡಬೇಡ ಗಂಡಸರಿಗೆ ಏನೂ ತಿಳಿಯುವದಿಲ್ಲ. ಸುಮ್ಮನೇ........

**ಸುಮತಿ**— ಅಲ್ಲೇಽ........ಅವರು ಹೇಳುವುದಾದರೂ ಕೇಳು.

**ಶೋಭಾವತಿ**— ಗಂಡಸರು ಏನು ಹೇಳುತ್ತಾರೆ ? ನೀನು ಏನೂ ಕೆಲಸ ಮಾಡಬೇಡ. ವಿಶ್ರಾಂತಿ ತೆಗೆದುಕೋ.

**ಸುಮತಿ**— ಅಲ್ಲೇಽ....ನನಗೇನೂ ಆಗಿಲ್ಲ.

**ಶೋಭಾವತಿ**— ಛೀ ! ಮತ್ತೆ ನಾಚಿಕೆ ಬೇರೆ.

[ ಶೋಭಾವತಿ ಜುಲುಮೆಯಿಂದ ಸುಮತಿಯನ್ನು ಕರೆದುಕೊಂಡು ಒಳಗೆ ಹೋಗುವಳು. ಆಗ ದೇವಶರ್ಮ ಪೆಚ್ಚಾಗಿ ನಿಲ್ಲುವನು. ಸ್ವಲ್ಪ ಸಮಯದಲ್ಲಿಯೇ ಶೋಭಾವತಿ ಹೊರಗೆ ಬಂದು ]

**ಶೋಭಾವತಿ**— ಆರ್ಯ, ಇವಳನ್ನು ಚೆನ್ನಾಗಿ ನೋಡಿಕೊಳ್ಳಿರಿ. ನಾನು ಈಗ ಆಸ್ಥಾನಕ್ಕೆ ಹೋಗಿಬರುತ್ತೇನೆ.

**ದೇವಶರ್ಮ**— ಇಷ್ಟು ಬೇಗ ? ಮಧ್ಯಾಹ್ನದಲ್ಲಿ ಇಷ್ಟು ಬೇಗ ಸಭೆ ಇದೆಯೇ ?

**ಶೋಭಾವತಿ**— ಅಯ್ಯೋ ನಿಮಗೆ ಗೊತ್ತೇ ಇಲ್ಲವೇ ? ನಾಗಚಂದ್ರ ಕವಿಗಳು ನಿಮಗೆ ಏನೂ ಹೇಳಿಲ್ಲವೇ ?........ಈಗಾಗಲೇ ಅವರು ಆಸ್ಥಾನಕ್ಕೆ ಹೋಗಿರುವರು.

**ದೇವಶರ್ಮ**— ಇದೇನು, ನನ್ನನ್ನು ಬಿಟ್ಟು ಹೋಗಿರುವರೇ ?

**ಶೋಭಾವತಿ**— ಮಹಾಕವಯಿತ್ರಿ ಕಂತಿಯೂ ಹೋಗಿರುವಳು.

**ದೇವಶರ್ಮ**— ಎಲ್ಲರೂ ಹೋಗಿರುವರೇ ? ನನಗೆ ಯಾವುದೂ ಗೊತ್ತಿಲ್ಲ.

**ಶೋಭಾವತಿ**— ಮನೆಯಲ್ಲಿ ಸರಸವಾಡುತ್ತ ಕುಳಿತರೆ ಹೇಗೆ ಗೊತ್ತಾಗಬೇಕು ? ನಾಲ್ಕು ದಿನಗಳ ಹಿಂದೆ ಮಹಾಕವಯಿತ್ರಿ ಕಂತಿ, ಅಭಿನವ

ಪಂಪನನ್ನು ಏನೂ ಹೊಗಳಲಿಲ್ಲವಂತೆ. ಪಂಪನಲ್ಲಿ ಶ್ರೇಷ್ಠ ಕವಿತ್ವ ಇಲ್ಲವೆಂದಳಂತೆ! ಅದಕ್ಕೆ ಮಹಾಕವಯಿತ್ರಿ ಕಂತಿಯನ್ನು ಸೋಲಿಸ ಬೇಕೆಂದು ಪಂಪನು ಹಟತೊಟ್ಟು ಆಸ್ಥಾನಕ್ಕೆ ಹೋಗಿರುವನಂತೆ. ಈ ದಿನ ಇದನ್ನು ನೋಡಲು ಬಹಳ ಜನ ಹೋಗಿದೆ ಆಸ್ಥಾನಕ್ಕೆ. ಅದಕ್ಕೆ ನಾನೂ ಸುಮತಿಯನ್ನು ಕರೆದುಕೊಂಡು ಹೋಗಬೇಕೆಂದು ಬಂದಿದ್ದೆ.

[ ಒಳಗಿನಿಂದ ಸುಮತಿ ಓಡಿಬಂದು ]

**ಸುಮತಿ**— ಶೋಭಾವತಿ, ನಾನೂ ಬರುತ್ತೇನೆ.

**ದೇವಶರ್ಮ**— ಇದೇನು? ಒಳಗೆ ಇಲಿಯನ್ನು ಮುರಿಮುರಿದು ತಿನ್ನುತ್ತಿದ್ದೆ ಏನು?

**ಸುಮತಿ**— ಛೀ! ಸುಮ್ಮನಿರಿ. ನಾನೂ ಬರಬೇಕೋ ಬೇಡವೋ??

**ದೇವಶರ್ಮ**— ಆಗಲಿ ಮಹಾರಾಯಳೇ!

## ದೃಶ್ಯ ೪

[ ಅರಮನೆಯ ಸಮೀಪದಲ್ಲಿರುವ ರಾಜಬೀದಿ. ಜನರು ಸಭೆ ಮುಗಿಸಿಕೊಂಡು ಆನಂದದಿಂದ ತಮ್ಮ ತಮ್ಮ ಮನೆಗಳಿಗೆ ಹೋದಮೇಲೆ, ಕಂತಿ ಬರುವಳು. ಅವಳು ತನ್ನ ಗೆಲುವಿನ ಆನಂದದಿಂದ ಯಾವುದೋ ಹಾಡನ್ನು ಗುಣಗುಣಿಸುತ್ತ ಬರುವಳು. ]

**ಕಂತಿ**— ( ಬಹಳವಾದ ಸಂತೋಷದಿಂದ ಹಾಡುತ್ತಿರುವಳು. )

ಹಲವು ವೃಕ್ಷದ ಮಧ್ಯದೋಳ್ ಪೂತು
ಕಾಡು ಕಾಯಾಗಿರ್ಪುದು
ಮರ ಬೇವುದ ನಾ ಕಂಡೆ
ಉರಿ ಹೊಗೆ ಕಾಣೆ

ಇದೇನು ವಿಚಿತ್ರ, ಹೇಳು ಕಂತಿ?

**ಶೋಭಾವತಿ**— ( ಪ್ರವೇಶಿಸಿ ) ನಾನು ಹೇಳಲೇ? ಅದು 'ಬೇವಿನ ಮರ'

[ ಕಂತಿ ಮತ್ತು ಶೋಭಾವತಿ ನಗುವರು. ]

ಇದೇನು ಮಹಾಕವಿಯಿತ್ರಿ, ಒಬ್ಬಳೇ ಹಾಡನ್ನು ಗುಣುಗುಣಿಸುತ್ತ ಹೊರಟಿರುವೆ? ಅದೂ ಆಸ್ಥಾನದಲ್ಲಿ ನಾಗಚಂದ್ರ ಕೇಳಿದ ವಿಚಿತ್ರ ಸಂಗತಿ! ಅದೇಕೆ, ನಾಗಚಂದ್ರನ ಮೇಲೆ ಪ್ರೀತಿ ಹೆಚ್ಚಾಗಿದೆಯೇನು?

**ಕಂತಿ**— ಛೀ! ಶೋಭಾ! ಹಾಗೆಲ್ಲ ಮಾತನಾಡಬೇಡ. ಆದರೂ ನೋಡು, ನಾಗಚಂದ್ರ ಕೇಳಿದ ಒಗಟ ಚೆನ್ನಾಗಿತ್ತಲ್ಲವೇ?

**ಶೋಭಾವತಿ**— ಅದಕ್ಕೆ ನಿನ್ನ ಉತ್ತರ ಸಾಮಾನ್ಯವಾಗಿತ್ತೇನು? ಥಟ್ಟನೆ ದಿಟ್ಟತನದಿಂದ ನೀನು 'ಬೇವಿನ ಮರ' ಅಂದಕೂಡಲೇ, ಗಂಡಸರೆಲ್ಲ ಮುಖ ಕೆಳಗೆ ಹಾಕಿದರು. (ಸ್ವಲ್ಪ ಯೋಚಿಸಿ) ಅಲ್ಲ ಕಂತಿ, ನನಗೆ ಆ ನಾಗಚಂದ್ರ, ಆ ಪಂಪಕವಿ 'ಬೇವಿನ ಮರ'ನೇ ಎಂದು ಅನಿಸುತ್ತದೆ. ನಿನಗೆ ಹೇಗೆ ಅನಿಸುವುದು?

**ಕಂತಿ**— ಅದೇಕೆ ಶೋಭಾ? ಬೇವಿನ ಮರ ಎಂದು ಏಕೆ ಕರೆಯುವೆ?

**ಶೋಭಾವತಿ**— ಮರ ಬೇವುದ ಕಂಡೆ, ಉರಿ ಹೊಗೆ ಕಾಣೆ ಎಂಬುದು ಅವ ನಿಗೆ ಸರಿಯಾಗಿ ಹೋಲುತ್ತದೆ. ನಿನ್ನ ಮೇಲೆ ಅವನಿಗೆ ಬಹಳ ಸಿಟ್ಟು ಇರಬೇಕು ಆದರೆ ಹೊರಗೆ ಮಾತ್ರ ಇದನ್ನು ತೋರಿಸಿಕೊಟ್ಟಿಲ್ಲ. ನನಗೆ ಗೊತ್ತು! ಗಂಡಸರೆಲ್ಲ ಹೀಗೆಯೇ. ನೀನು ದೊಡ್ಡವಳಾಗಲು ಅವನಿಗೆ ಹೊಟ್ಟೆಕಿಚ್ಚು. ಆ ಕಿಚ್ಚು ಇನ್ನೂ ಅವನ ಹೊಟ್ಟೆಯಲ್ಲಿಯೇ ಕುಳಿತಿದೆ.

**ಕಂತಿ**— ಶೋಭಾ, ನಾವೆಲ್ಲ ಅದನ್ನು ತೆಗೆದುಕೊಂಡು ಏನು ಮಾಡಬೇಕು? ನಾನು ತೊತ್ತಾಗಿ ಇದ್ದವಳು, ಒಮ್ಮೆಲೇ ರಾಜಾಶ್ರಯದಿಂದ ಸಿರಿವಂತಿಕೆ ಅನುಭವಿಸುವುದು ಅವರಿಗೆ ಮನಸ್ಸಿಗೆ ಬಂದಿರಲಿಕ್ಕಿಲ್ಲ. ಅಥವಾ........ ಹೀಗೂ ಇದೆ. ನಾನು ಪಂಪನ ಕಾವ್ಯ ಹೊಗಳಬೇಕೆಂದು, ನಾಲ್ಕು ಜನರಲ್ಲಿ ಹೊಗಳಬೇಕೆಂದು ಅವರ ಇಚ್ಛೆ. ಹಾಗೆ ನಾನು ಇನ್ನೂ ಮಾಡಿಲ್ಲ........ಆದರೂ ಶೋಭಾ, ನಾಗಚಂದ್ರ ಆಸ್ಥಾನದಲ್ಲಿ ಇದ್ದು ಕೊಂಡು ನನಗೆ ಪ್ರಶ್ನೆ ಕೇಳುವುದರಿಂದ, ಒಂದು ಮೋಜು ಅನಿಸುತ್ತದೆ. ವಿಚಿತ್ರ ಉತ್ಸಾಹವೂ ನನಗೆ ಬರುತ್ತಿದೆ.

**ಶೋಭಾವತಿ**— ಅದೂ ನಿಜ. ನಿನ್ನನ್ನು ಪರೀಕ್ಷಿಸಬೇಕೆಂದೇ ಈ ದಿನ ಒಂದು ಪ್ರಶ್ನೆ ನಾಗಚಂದ್ರ ಕೇಳಿದ. ನಿನಗೆ ಗೊತ್ತೇ ಅದು? ನಿನ್ನನ್ನು

ಸಾಯಿಸಿಬಿಟ್ಟಿದ್ದ. ನೀನು ಇಲ್ಲಿ ಇರದೆ, ಎಲ್ಲಿಯಾದರೂ ತವರುಮನೆಗೆ ಹೋಗಬೇಕೆಂದು ಅವನ ಇಚ್ಛೆ ಇತ್ತು.

**ಕಂತಿ**— ಅದು ಯಾವ ಪ್ರಶ್ನೆ ನೀನು ಹೇಳುವುದು ?

**ಶೋಭಾವತಿ**— ಅದೇ........ಸತ್ತವಳೆದ್ದು ತೌರೂರಿಗೆ ಪೋಗುತ್ತಿರ್ದಳ್.... ' ಸತ್ತವಳು ' ಅಂದರೆ ನೀನೇ.

**ಕಂತಿ**— ಶೋಭಾ, ಅಂತೂ ಒಳ್ಳೇ ಅರ್ಥ ಹಚ್ಚುವಿ ನೀನು. ನಾವಿಬ್ಬರೂ ಗೆಳತಿಯರಾದುದು ಸಾರ್ಥಕವಾಯಿತು ನೋಡು....ಆದರೆ ' ಸತ್ತವಳು ' ಹೇಗೆ ಏಳುವಳು ? ಆದಕ್ಕೇ ನಾನು ನಾಯಲೇ ಇಲ್ಲ.

**ಶೋಭಾವತಿ**— ಅಯ್ಯ ! ನಿನ್ನ ಉತ್ತರ ನಿನಗೆ ನೆನಪು ಇಲ್ಲವೇನು ? ಅತ್ತೆಯ ಕಾಟ ಅಧಿಕ, ಮತ್ತಿನ ಸವತಿಯರ ಕಾಟ, ನಾದಿನಿ ಬೈವಳು, ಹೆತ್ತ ಮಕ್ಕಳು ಅಳುವರು, ಗಂಡ ಬೈಯುವನು. ಇವೆಲ್ಲಕ್ಕೂ ಬೇಸತ್ತು ಅವಳೆದ್ದು ತವರೂರಿಗೆ ಹೋಗುವವಳು. ( ನಕ್ಕು ) ಕಂತೀ, ಹೆಣ್ಣಿನ ಬಾಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ನೀನು ಉತ್ತರ ಹೇಳಿದೆ ನೋಡು. ನಿನ್ನ ಉತ್ತರ ಕೇಳಿ ಗಂಡಸರೂ, ಹೆಂಗಸರೂ ಎಲ್ಲರೂ ನಗುತ್ತಿದ್ದರು.

[ ಅಷ್ಟರಲ್ಲಿ ಸುಮತಿ ನಗುತ್ತ ಪ್ರವೇಶಿಸುವಳು. ]

**ಕಂತಿ**— ಇದೇನು ಸುಮತಿ, ಹೀಗೇಕೆ ನಗುವಿ ?

**ಸುಮತಿ**— ಇಲಿಯನ್ನು ಮುರಿಮುರಿದು ತಿನ್ನುವರು........ಈಗ ನನಗೆ ಅದರ ಅರ್ಥ ಹೊಳೆಯಿತು.

**ಶೋಭಾವತಿ**— ಯಾರೇ ನಿನಗೆ ಅದರ ಅರ್ಥ ಹೇಳಿದವರು ?

**ಸುಮತಿ**— ನನ್ನ ಗೆಳತಿ. ಇದೀಗ ದಾರಿಯಲ್ಲಿ ಹೇಳಿದಳು. ಸರಸಿಜಾಕ್ಷಿಯರು ಮಾಡುವ ತಿಲತೈಲದಲ್ಲಿಯ ಚೆಕ್ಕಿಲಿಯನ್ನು ಮುರಿಮುರಿದು ತಿನ್ನುತ್ತಿರುವರು. ಭೇಷ್ ಕಂತೀ, ಒಳ್ಳೇ ಉತ್ತರ ಹೇಳಿರುವೆ. ಹೆಂಗಸರಿಗೆ ಬೇಕಾದದ್ದೆಲ್ಲ ನೀನು ಸರಿಯಾಗಿ ಸ್ಪಷ್ಟವಾಗಿ ಹೇಳಿರುವೆ.

**ಕಂತಿ**— ನೀವೆಲ್ಲ ಹೀಗೆ ಅನ್ನಬೇಡಿರಿ. ಹೀಗೆ ನೀವು ನನ್ನನ್ನೇ ಬಹಳ ಹೊಗಳಿದರೆ ನಿಮ್ಮ ನಾಗಚಂದ್ರ, ದೇವಶರ್ಮ ನನ್ನನ್ನು ಶೂಲಕ್ಕೇರಿಸಿ ಬಿಟ್ಟಾರು !

**ಶೋಭಾವತಿ**— ಅಹುದು, ನೆನಪಾಯಿತು. ಸುಮತಿ, ನಿಮ್ಮ ದೇವಶರ್ಮ ಕವಿಗಳು ಎಲ್ಲಿ ? ನಿನಗೆ ಅವರು ಸಿಕ್ಕಲಿಲ್ಲವೇನು ?

**ಸುಮತಿ**— ಕಾಣಿಸಲೇ ಇಲ್ಲ. ಓಲಗದ ಬಾಗಿಲದ ಹತ್ತಿರ ನಿಂತುಕೊಂಡಿದ್ದರು. ಮಾತನಾಡಿಸಿದೆ. ಯಾಕೋ ಮಾತಾಡಲೇ ಇಲ್ಲ. ಜನರೆಲ್ಲ ನಗುತ್ತಿದ್ದರು. ಇವರಿಬ್ಬರೂ ಸುಮ್ಮನೇ ನಿಂತಿದ್ದರು.

**ಕಂತಿ**— ಸುಮ್ಮನೇ ನಿಂತಿದ್ದರು !!

**ಶೋಭಾವತಿ**— ಏಕೆ ? ಏನು ಕಾರಣ ??

**ಸುಮತಿ**— ಯಾರಿಗೆ ಗೊತ್ತು !!........ನಾನು ಹಾಗೆಯೇ ಮುಂದೆ ಬಂದು ಬಿಟ್ಟೆ. ಅವರು ಎಲ್ಲೋ ಅಡ್ಡದಾರಿ ಹಿಡಿದು ಹೋಗಿರಬೇಕು.

**ಶೋಭಾವತಿ**— ಹೀಗೇಕೆ ಸುಮತಿ ? ಜನರ ಜೊತೆಗೆ ಏಕೆ ಬರಬಾರದು ?

**ಕಂತಿ**— ಅದಕ್ಕೆಲ್ಲ ಕಾರಣ ಬೇರೆ ಇದೆ. ಮನೆಗೆ ಹೋಗೋಣ ಬಾ. ನನಗೇಕೋ ಇಲ್ಲಿ ನಿಲ್ಲುವುದೇ ಆಗಲೊಲ್ಲದು.

## ದೃಶ್ಯ ೫

[ ನಾಗಚಂದ್ರನ ಮನೆ. ಬೆಳಗಾಗಿದೆ. ನಾಗಚಂದ್ರ ಗಹನವಾದ ವಿಚಾರದಲ್ಲಿ ಶತಪಥ ತಿರುಗುತ್ತಿದ್ದಾನೆ.]

**ದೇವಶರ್ಮ**—ಈ ದಿನ ಹೀಗೇಕೆ ಮಾಡುತ್ತಿರುವಿರಿ ಕವಿರಾಜ ? ಫಲಾಹಾರವನ್ನು ತೆಗೆದುಕೊಂಡಿಲ್ಲ ! ಯಾವ ಚಿಂತೆಯಲ್ಲಿರುವಿರಿ ? ನಾನು ಏನು ಮಾಡಬೇಕು ಹೇಳಿರಿ, ಕವಿರಾಜ.

**ನಾಗಚಂದ್ರ**— ನಾನು ಸತ್ತೆನೆಂದು ಹೇಳು.

**ದೇವಶರ್ಮ**— ಅಯ್ಯೋ, ಎಂಥ ಮಾತು! ಶಾಂತಂ ಪಾಪಂ!

**ನಾಗಚಂದ್ರ**— ಸಾಯುವ ಹೊರತು ಬೇರೆ ಮಾರ್ಗವೇ ಇಲ್ಲ.

**ದೇವಶರ್ಮ**— ಕವಿರಾಜ, ಹೀಗೇಕೆ ಅನ್ನುವಿರಿ? ಕತ್ತಲೆಯು ಸರಿದು ಬೆಳಗಾಗಿದೆ. ಜನರೆಲ್ಲ ಉತ್ಸಾಹದಿಂದ ಓಡಾಡುತ್ತಿದ್ದಾರೆ. ನೀವೀಗ ನಕ್ಕು ನಲಿಯಬೇಕು

**ನಾಗಚಂದ್ರ**— ಅದೆಲ್ಲ ನನಗೆಲ್ಲಿ? ನನ್ನದೇನಿದೆ? ಆ ಕಂತಿಯು ಆಸ್ಥಾನ ಕವಿಯಿತ್ರಿಯಾದಂದಿನಿಂದ ನನ್ನ ಬೆಲೆಯೆ ಇಲ್ಲದಂತಾಗಿದೆ.

**ದೇವಶರ್ಮ**— ಅದು ಹೇಗೆ ಕವಿರಾಜ? ಎಲ್ಲರೂ ನಿಮ್ಮನ್ನು ಹೊಗಳುತ್ತಾರೆ.

**ನಾಗಚಂದ್ರ**— ಆದರೆ..........? ಆ ಕವಿಯಿತ್ರಿ ಕಂತಿ ಹೊಗಳಬೇಕಲ್ಲ? ನಿನ್ನೆ ಓಲಗದಲ್ಲಿಯೂ ಪರೀಕ್ಷೆ ಮಾಡಿ ನೋಡಿದೆ........ನನ್ನ ಕಾವ್ಯ ಮಡಕೆಯಂತೆ! ವ್ಯರ್ಥವಂತೆ!..............ನಾನು ಮಹಾಕವಿ ಅಲ್ಲವಂತೆ! ಕವಿಚಕ್ರವರ್ತಿ ಅಲ್ಲವಂತೆ!........ಅಯ್ಯೋ ದೇವಶರ್ಮ.... ನನ್ನ ಕಣ್ಣಿಗೆ ಚಕ್ರ ಬರುತ್ತಿದೆ....... ಇದೀಗ ಬೆಳಕಿಗೆ ಬಂದ ಕಂತಿ, ನನ್ನನ್ನು ಹೀಗೆ ತೆಗಳಬೇಕೆ?...........ಮತ್ತೆ ಜನತೆ ಹೆಚ್ಚಾಗಿ ಕಂತಿಯನ್ನೇ ಹೊಗಳುವದು........ಅಯ್ಯೋ!!........ಎಂತಹ ಸ್ಥಿತಿ!!

**ದೇವಶರ್ಮ**— ಕವಿರಾಜ, ಈ ಹೊಗಳುವಿಕೆ, ತೆಗಳುವಿಕೆ ಕ್ಷಣಿಕವಾದವು. ನಿಮ್ಮ ಕಾವ್ಯಕೀರ್ತಿಯ ಬೆಳಕು ಎಂದಾದರೂ ನಂದೀತೇ?

**ನಾಗಚಂದ್ರ**— ಅದೇನೇ ಇರಲಿ. ಯಾವ ವಿಚಾರವೂ ಬೇಡ. ನಾನು ಸಾಯಬೇಕು. ಇನ್ನು ಬದುಕುವಲ್ಲಿ ಸುಖವಿಲ್ಲ.

**ದೇವಶರ್ಮ**— ಮತ್ತೆ ಅದನ್ನೇ ಮಾತಾಡುವಿರಲ್ಲ? ಬದುಕಿರುವಾಗಲೂ ಸಾಯುವ ಮಾತೇಕೆ?

**ನಾಗಚಂದ್ರ**— ( ಸ್ವಲ್ಪ ಯೋಚಿಸಿ, ಒಮ್ಮೆಲೆ ಒಂದು ಅಪೂರ್ವ ವಿಚಾರದಿಂದ ) ದೇವಶರ್ಮ, ಒಂದು ಮೋಜು ಮಾಡೋಣ.

**ದೇವಶರ್ಮ**— ( ಆನಂದದಿಂದ ) ಅದು ಯಾವುದು ಕವಿರಾಜ?

**ನಾಗಚಂದ್ರ**— ನಾನು ಸತ್ತಂತೆ ಬಿದ್ದುಕೊಳ್ಳುತ್ತೇನೆ. ನನ್ನ ಮೈತುಂಬಾ ಹೊಚ್ಚಿಬಿಡು.

**ದೇವಶರ್ಮ**— ಇದೇನು ಮೋಜು ? ಮತ್ತೆ ಮತ್ತೆ ಅದನ್ನೇ ಹೇಳುವಿರಲ್ಲ ?

**ನಾಗಚಂದ್ರ**—ಅಹುದು, ನಾನು ಸತ್ತರೆ ಜನರು ಏನೇನು ಆಡಿಕೊಳ್ಳುವರೋ ನೋಡಿಯಾದರೂ ನೋಡೋಣ.

**ದೇವಶರ್ಮ**— ಅದೆಲ್ಲ ಮೋಜಾಯಿತು. ಸತ್ತಿರುವರೆಂದು ನೀವು ಬದುಕಿರುವಾಗಲೂ ಹೇಳಿದರೆ ನನ್ನದು ಎಂತಹ ಪಾಪ !

**ನಾಗಚಂದ್ರ**— ಆ ಪಾಪದ ಚಿಂತೆ ಏಕೆ ? ನಾನು ಇದ್ದೇನೆ.

**ದೇವಶರ್ಮ**— ವಿಷ್ಣುವರ್ಧನ ಮಹಾಪ್ರಭುಗಳು, ಮಹಾರಾಣಿಯವರು ಇಲ್ಲಿಗೆ ಪ್ರತ್ಯಕ್ಷ ಬಂದು ನೋಡಿದರೆ ?........ನಾನು ಸುಳ್ಳು ಹೇಳಿರುವೆನೆಂದು ನನ್ನನ್ನು ಶೂಲಕ್ಕೇರಿಸಿದರೆ ?

**ನಾಗಚಂದ್ರ**— ಅದಕ್ಕೂ ನಾನು ಇದ್ದೇನೆ. ನಾನು ಸತ್ತ ಸುದ್ದಿಯನ್ನು ಕಂತಿಯ ಮನೆಯಲ್ಲಿ ಮೊದಲು ತಿಳಿಸು. ಈ ಸುದ್ದಿ ಅರಮನೆಗೆ ಹೋಗದಂತೆ ನೋಡಿಕೊಳ್ಳೋಣ............ನೋಡು, ಅತ್ಯಂತ ದುಃಖದಿಂದ ಅಳುತ್ತ, ಕಂತಿಯ ಮನೆಯಲ್ಲಿ ಕಾಲಿಡಬೇಕು. ನೋಡೋಣ ಹೇಗೆ ಅಳುವಿ ?

( ದೇವಶರ್ಮ ಅತ್ತು ದುಃಖಿಸಿ ತೋರಿಸುವನು. )

ಹೂಂ ! ಭೇಷ್ ! ಹೀಗೆ ಹೋಗಿ ಮಾತನಾಡಿ ಹೇಳು.

**ದೇವಶರ್ಮ**— ಕವಿರಾಜರ ಆಜ್ಞೆ. ಹೇಗಾದರೂ ನಿಮಗೆ ಸುಖವಾದರೆ ಸಾಕು.

**ನಾಗಚಂದ್ರ**— ಹೋಗಿ ಬೇಗ ಬಾ. ಅವಳ ಮನೆ ಐದು ನಿಮಿಷದ ದಾರಿಯಲ್ಲಿದೆ. ಅಷ್ಟರಲ್ಲೇ ನಾನು ಸಿದ್ಧನಾಗುವೆ. ಹೂಂ ! ಹೊರಡು.

[ ದೇವಶರ್ಮ ಹೊರಡುವನು—ದುಃಖಿಸುತ್ತ ]

**ನಾಗಚಂದ್ರ**— ಸಾವು ಜನ್ಮದಲ್ಲಿ ಒಮ್ಮೆ ಬರುವುದು ನನಗೆ ಮಾತ್ರ ನನ್ನ ಭವಿಷ್ಯದಲ್ಲಿ ಎರಡು ಸಲ ಇದ್ದಂತೆ ತೋರುತ್ತದೆ. ದ್ವಿಮರಣ ಮಾನವರು ನಾವು ಇರಬೇಕು. ಹೂ ! ಆಗಲಿ. ಎಲ್ಲವನ್ನು ತಯಾರಿಸೋಣ.

ಆಕಸ್ಮಾತ್ ಅರಮನೆಗೆ ಈ ಸುದ್ದಿ ಮುಟ್ಟಿದರೆ ಏನಾಗುವುದು? ಛೀ, ಮುಂದಿನ ವಿಚಾರ ಈಗೇಕೆ? ಬೇಗ ಸಿದ್ಧವಾಗುವುದೇ ವಿಹಿತ.

[ ನಾಗಚಂದ್ರ ಎಲ್ಲ ಸಿದ್ಧತೆ ಮಾಡಿಕೊಳ್ಳುವನು. ಪಲಂಗದ ಮೇಲೆ ಸತ್ತಂತೆ ಬಿದ್ದು, ಮೈತುಂಬ ಬಿಳಿಬಟ್ಟೆ ಹೊದ್ದುಕೊಳ್ಳುವನು. ]

**ದೇವಶರ್ಮ—** ( ಓಡಿಬಂದು ತೇಕುತ್ತ ) ಕವಿರಾಜ, ಕವಿರಾಜ ( ಕಿವಿಮಾತಿನಲ್ಲಿ) ಸುದ್ದಿ ಕೇಳಿದ ಕೂಡಲೇ ಕಂತಿ ಅಳುತ್ತ ಓಡಿಯೇ ಬಂದಳು. (ಬಾಗಿಲ ದಲ್ಲಿ ಕಂತಿ ಅಳುತ್ತ ಕೂದಲು ಹರವಿಕೊಂಡು ನಿಂತದ್ದನ್ನು ಕಂಡಕೂಡಲೇ ದೇವಶರ್ಮ ತಾನೂ ಅಳಹತ್ತುವನು.)

**ಕಂತಿ—** ( ದುಃಖದ ಆವೇಗದಿಂದ ಪ್ರವೇಶಿಸಿ ) ಎಂತಹ ಸುದ್ದಿ ಬೆಳಗಿನಲ್ಲಿ! ನಿನ್ನೆ ಸಂಜೆಯೆ ನೋಡಿದ್ದೆನಲ್ಲ! ದೈವ ಎಷ್ಟು ವಿಚಿತ್ರವಾಗಿದೆ! ( ದುಃಖಿಸುತ್ತ ಸಮೀಪಕ್ಕೆ ಬಂದು ) ಕವಿರಾಯ, ಕವಿಪಿತಾಮಹ, ಕವಿ ಕಂಠಾಭರಣ, ಕವಿಶಿಖಾಮಣಿ, ಕವಿಚಕ್ರೇಶ, ನಾವು ಅದೆಂತು ಬಂದು ನಿನ್ನನ್ನು ಒಯ್ದಿತು? ನೀನು ಹಾಡಿದರೆ ಕಲ್ಲೂ ಸಹ ಕಂಬನಿಗರೆಯು ವುದು. ಕೊಯ್ದು ಒಣಹಾಕಿದ ಹುಲ್ಲೂ ಕೂಡ ಚಿಗುರುವುದು? ಕಡಿದು ಚೆಲ್ಲಿದ ಅಡವಿಯ ಮರಗಳು ಚಿಗುರೆಲೆ ಸೂಸುವವು. ಹಾ, ಕಾವ್ಯರ್ಷಿ ಪಂಪಾ, ನೀನು ಇಲ್ಲದಂತಾದೆಯಾ? ನೀನಿಲ್ಲದ ಮೇಲೆ ಈ ದೋರ ಸಾಮ್ರಾಟನ ಓಲಗದ ಹಂಗು ನನಗೇಕೆ? ಇನ್ನಾರ ಜೊತೆ ಯಲ್ಲಿ ಕವಿತ್ವ ತರ್ಕ ಮಾಡಲಿ? ದೊಡ್ಡ ದೊಡ್ಡ ವಿಚಾರಗಳು ನನಗೆ ಇನ್ನು ಮೇಲೆ ಏಕೆ? ನೀನು ಹೋದಮೇಲೆ ಜಗತ್ತೇ ನನಗೆ ಬರಡು. ಅಯ್ಯೋ, ಚಿನ್ನಿಗ ಕವಿಪಂಪ, ಕವಿರಾಜ, ಕವಿರಾಜ........

**ನಾಗಚಂದ್ರ—** ( ಧಿಗಿಲ್ಲನೆ ಎದ್ದು ಕುಳಿತು ) ಹಾ! ನನ್ನ ಕಾರ್ಯವಾಯಿತು,

**ಕಂತಿ—** ( ತನ್ನ ಕಣ್ಣುಗಳನ್ನೆ ನಂಬಲಾರದಂತಾಗಿ ) ಇದೇನು ಸೋಜಿಗ! ಇದೆಂಥ ವಿಚಿತ್ರ ಸಂಗತಿ!!

**ನಾಗಚಂದ್ರ—** ಯಾವುದೂ ವಿಚಿತ್ರವಲ್ಲ. ಕಂತೀ, ನಿನ್ನಿಂದ ಹೊಗಳಿಸಿ ಕೊಳ್ಳುವುದು ನನಗೆ ಬೇಕಿದ್ದಿತು. ಮೊದಲೇ ನೀನು ಹೊಗಳಿದ್ದರೆ

ನಾನೆಲ್ಲಿ ಸಾಯುತ್ತಿದ್ದೆ ! ನೀನೆಲ್ಲಿ ಅಳುತ್ತಿದ್ದಿ ! ನನ್ನನ್ನು ಕವಿರಾಜನೆಂದು ಕರೆದೆಯಲ್ಲ. ಅಯ್ಯೋ, ನೀನು ಸೋತೆ.

**ಕಂತಿ**— ಇಷ್ಟೇನೆ ! ( ಬಿದ್ದು ನಗುವಳು ) ನಾನು ಆ ದಿನ ಹಾಗೆಯೇ ಚೇಷ್ಟೆಗಾಗಿ ಹೇಳಿದ್ದರ ಪರಿಣಾಮ ಹೀಗಾಯಿತೇ !! ನಿಮ್ಮ ಕವಿತ್ವ ಮಡಕೆ ಅಲ್ಲ. ನೀವು ಶ್ರೇಷ್ಠ ಕವಿಗಳು ಎಂಬುದು ನನಗೆ ಸಂಪೂರ್ಣ ಗೊತ್ತಿದೆ. ಇದು ನನ್ನ ಸ್ಪಷ್ಟ ಅಭಿಪ್ರಾಯ, ಅಭಿನವ ಪಂಪ ಕವಿರಾಜ !

**ನಾಗಚಂದ್ರ**— ನೀನು ಕನ್ನಡ ಸಾಹಿತ್ಯಕ್ಕೆ ಮೊದಲ ಶ್ರೇಷ್ಠ ಕವಯಿತ್ರಿ. ಅಲ್ಲ........ಮಹಾಕವಯಿತ್ರಿ ಅಲ್ಲವೇ ?

[ ಎಲ್ಲರೂ ನಗುತ್ತಿರುವಾಗ— ]

ಪರದೆ

# ಫಲದ ಆಶೆ

[ ಹದಿಬದೆಯ ಹೊನ್ನಮ್ಮನ ಜೀವನಚಿತ್ರವನ್ನು ನಿರೂಪಿಸುವ ನಾಟಕ ]

ಪಾತ್ರಗಳು

| | | | |
|---|---|---|---|
| ೧. | ಹೊನ್ನಮ್ಮ | — | ರಾಜನ ಸಂಚಿಯುವಳು |
| ೨. | ಚಿಕದೇವರಾಜ | — | ಶ್ರೀರಂಗಪಟ್ಟಣದ ಒಡೆಯರು |
| ೩. | ದೇವಾಜಮ್ಮಣ್ಣಿ | — | ಚಿಕದೇವರಾಜರ ಪಟ್ಟದ ರಾಣಿ |
| ೪. | ಆಳಸಿಂಗರಾರ್ಯ | — | ಅರಮನೆಯ ಗುರುಗಳು |

ಕಾಲ : ೧೭ನೆಯ ಶತಮಾನ

ಸ್ಥಳ : ಶ್ರೀರಂಗಪಟ್ಟಣದಲ್ಲಿಯ ಅರಮನೆ

# ದೃಶ್ಯ ೧

[ ಶ್ರೀರಂಗಪಟ್ಟಣದಲ್ಲಿ ಮೈಸೂರು ಒಡೆಯರ ಅರಮನೆಯ ಒಳಭಾಗ. ಚಿಕ ದೇವರಾಜ ಒಡೆಯರ ಪಟ್ಟದ ರಾಣಿ ದೇವಾಜಮ್ಮಣ್ಣಿಯವರ ಅಂತಃಪುರದ ಒಂದು ಭಾಗ. ಬೆಳಗಿನ ಜಾವ. ದೇವಾಜಮ್ಮಣ್ಣಿ ಅಲಂಕೃತಳಾಗಿ ಸುಖಾಸೀನಳಾಗಿದ್ದಾಳೆ. ಒಬ್ಬ ದಾಸಿ-ಬಾಜಿಸುತ್ತಿರುವ ವೀಣೆಯ ಧ್ವನಿಯನ್ನು ಕೇಳುವಾಗ, ಅವಳ ಹೃದಯದ ವೀಣೆಯೂ ಮಿಡಿಯುತ್ತಿರುತ್ತದೆ. ಆ ಸಂಗೀತದಲ್ಲಿ ಅವಳು ಅಷ್ಟು ತಲ್ಲೀನತೆ ಪಡೆದಿರುವಳು. ಕೊಂಚ ಸಮಯದ ನಂತರ ಹೊನ್ನಮ್ಮ ಒಂದು ಹೆಣಿಕೆಯ ಬಟ್ಟೆಯಿಂದ ಹೊಚ್ಚಿದ ಒಂದು ದೊಡ್ಡ ಬೆಳ್ಳಿಯ ತಾಟನ್ನು ಹಿಡಿದುಕೊಂಡು ಬಂದು ಸುಮ್ಮನೇ ಬಾಗಿಲದಲ್ಲಿ ನಿಲ್ಲುತ್ತಾಳೆ. ಆಗ ದೇವಾಜಮ್ಮಣ್ಣಿ ಆತುರತೆಯಿಂದ ಎದ್ದು ಬಂದು, ಹೊನ್ನಮ್ಮನನ್ನು ಮಾತನಾಡಿಸುತ್ತಾರೆ. ]

**ದೇವಾಜಮ್ಮಣ್ಣಿ**— ಇದೇನು ಹೊನ್ನಮ್ಮ? ನಿನ್ನ ಮುಖ ಹೀಗೇಕೆ ಬಾಡಿದ ಹೂವಾಗಿದೆ?........ ( ತಟ್ಟೆಯ ಮೇಲಿನ ಬಟ್ಟೆಯನ್ನು ತೆಗೆದೊಗೆದು ನೋಡಿ ) ಇದೇನು ? ನಿನಗೆ ಫಲಗಳು ಸಿಗಲಿಲ್ಲವೇ ?

**ಹೊನ್ನಮ್ಮ**— ದೇವಿಯವರೆ, ಫಲ ನನಗೆ ಸಿಗಲಿಲ್ಲ.

**ದೇವಾಜಮ್ಮಣ್ಣಿ**— ಅದೇಕೆ ? ಸಿಗದಂಥ ಫಲಗಳಾದರೂ ಯಾವು ? ನಮಗೆ ಬೇಕೆಂದು ಹೇಳಿದರೆ, ಯಾರೂ ಕೊಡಲಾರರೇ ?

**ಹೊನ್ನಮ್ಮ**— ದೇವಿಯವರೇ, ಮಹಾಪ್ರಭು ಚಿಕದೇವರಾಜರು, ಮಹಾರಾಣಿಯವರಾದ ನೀವು ಇರಲು ಇಲ್ಲಿ ಎಲ್ಲವೂ ಸಿಗುವವು. ಆದರೆ ನನಗೆ ಮಾತ್ರ ಫಲ ಇನ್ನು ಇಲ್ಲ.

**ದೇವಾಜಮ್ಮಣ್ಣಿ**— ಹೊನ್ನಮ್ಮ, ಹೀಗೇಕೆ ಮಾತನಾಡುವೆ ? ಯಾವುವೋ ಚಿಂತೆಯ ಮೋಡಗಳು ನಿನ್ನಲ್ಲಿ ನುಸುಳಿಕೊಂಡಿವೆ. ಪ್ರತಿ ದಿನದಂತೆ ನಿನ್ನ ಬಗೆಯಾಗಸವು ತಿಳಿನೀಲಿಯಾಗಿಲ್ಲ ಏನಾಗಿದೆ ಹೇಳಮ್ಮ.

**ಹೊನ್ನಮ್ಮ**— ( ದುಃಖದಿಂದ ) ಈ ಹೆಣ್ಣಿನ ಜನುಮದಿಂದ ಫಲವಿಲ್ಲಾ ಎಂದು ಜನರು ಆಡಿಕೊಳ್ಳುತ್ತಾರೆ.

**ದೇವಾಜಮ್ಮಣ್ಣಿ**—( ನಕ್ಕು ) ಛೀ ಹುಚ್ಚಿ, ಜನರು ಆಡಿಕೊಳ್ಳುವ ಮಾತು ಗಳನ್ನು ಕೇಳಿ, ನೀನು ಹೀಗೆ ಮ್ಲಾನವದನೆಯಾಗಿರುವೆಯಾ? ಈಗ ಕೆಲವು ದಿನಗಳಿಂದ ನೀನು ಹೀಗೆಯೇ ಪೆಚ್ಚುಮುಖ ಮಾಡಿಕೊಂಡು ಓಡಾಡುತ್ತಿರುವಿ. ಇದಕ್ಕೆ ಜನರ ಮಾತುಗಳು ಕಾರಣವೇ? ಅಯ್ಯೋ, ಜನರ ನಾಲಗೆ ಬಿಗಿಹಿಡಿಯಲು ಬರುತ್ತದೆಯೇ?

**ಹೊನ್ನಮ್ಮ**— ದೇವಿಯವರೇ, ಕೆಲವು ದಿನಗಳಿಂದ ನನಗೆ ದಾರಿಯಲ್ಲಿ ಅಂತಹ ನೋಟಗಳೇ ಕಣ್ಣಿಗೆ ಬೀಳುತ್ತಿವೆ. ಹೃದಯ ಕೊರೆಯುವಂಥ ವಿಚಿತ್ರ ಮಾತು ಕೇಳಿಸುತ್ತಿವೆ.

**ದೇವಾಜಮ್ಮಣ್ಣಿ**— ಕಟ್ಟಾಣಿ ಹೊನ್ನಮ್ಮ, ನೀನು ನೋಡಿದ್ದಾದರೂ ಏನು? ಕೇಳಿದ್ದಾದರೂ ಏನು? ಹೇಳಿಯಾದರೂ ಹೇಳು.

**ಹೊನ್ನಮ್ಮ**— ದಾರಿಯಲ್ಲಿ ಒಂದು ಮನೆಯಲ್ಲಿ ಕೂಸಿನ ಧ್ವನಿ ಕೇಳಿಸಿತು. ಬಾಗಿಲದಲ್ಲಿ ಹಣ್ಣು ಮುದುಕನೊಬ್ಬ ಕುಳಿತಿದ್ದ. ತನ್ನ ಮಗಳು ಹಡೆದ ಸುದ್ದಿಯನ್ನು ಕೇಳಿ, ಅವನು ಸಂತೋಷಪಡದೆ ದುಃಖಿಸುತ್ತಿದ್ದ. 'ಹೆಣ್ಣು ಕೂಸು!.........ನನ್ನ ದುರ್ದೈವ! ಒಬ್ಬ ಮೊಮ್ಮಗ ನನ್ನು ನೋಡಿ ಪ್ರಾಣಬಿಡುವ ಸಮಯ ನನಗೆ ಬರಲಿಲ್ಲ. ಹೋದ ಜನ್ಮದಲ್ಲಿ ಏನು ಪಾಪ ಮಾಡಿರುವೆನೋ! ರಂಗಸ್ವಾಮಿಗೆ ಹರಕೆ ಹೊತ್ತಿದ್ದೆ....ಈ ಊರಲ್ಲಿ ಎಲ್ಲರಿಗೂ ಸಕ್ಕರೆ ಹಂಚಬೇಕೆಂದಿದ್ದೆ!.... ಮತ್ತೆ ಹೆಣ್ಣು........! ಅಯ್ಯೋ!' ಎಂದು ಅವನು ಒಂದೇಸವನೆ ಅಳುತ್ತಿದ್ದ.

**ದೇವಾಜಮ್ಮಣ್ಣಿ**— ಹೊನ್ನಮ್ಮ, ಅದೇನೋ ಸಂಪ್ರದಾಯ! ಮೂಢ ಭಾವನೆ ನಮ್ಮಲ್ಲಿ ಬೆಳೆದುಬಂದಿದೆ.

**ಹೊನ್ನಮ್ಮ**— ಅದೆಂಥ ಭಾವನೆ ದೇವಿಯವರೇ! ಮೊಮ್ಮಗಳನ್ನು ನೋಡಿ ಸಂತೋಷಪಡುವುದನ್ನು ಬಿಟ್ಟು, ಹೀಗೆ ಕಿರಿಚಿಕೊಳ್ಳಬೇಕೆ? ಪಶು ಪಕ್ಷಿ

ಗಳಿಗಿಂತ ಮಾನವರು ಕೆಳಗಿಳಿಯಬೇಕೆ? ದೇವಿಯವರೇ, ಮೊನ್ನೆ ಬರುವಾಗ, ದಾರಿಯಲ್ಲಿ ಬಹಳ ಗದ್ದಲವನ್ನು ನೋಡಿದೆ. ಅದು ಗಂಡ ಹೆಂಡಿರ ಜಗಳ. ಕೆಲವು ಜನ ಅಳುತ್ತಿತ್ತು. ಕೆಲವು ಜನ ಒದರುತ್ತಿತ್ತು. ಇಂಥ ಗದ್ದಲದಲ್ಲಿಯೂ ಆವಳ ಗಂಡ ಜೋರಾಗಿ ಒದರಾಡುತ್ತಿದ್ದ— "ನಾನು ಏನೆಂದು ತಿಳಿದಿರುವಿ? ನಿನ್ನ ತವರುಮನೆಗೆ ಹೋಗು! ನನ್ನ ಮನೆಯ ಹೊಸತಿಲದಲ್ಲಿ ಕಾಲಿಡಬೇಡ" ಎಂದು ಕೂಗುತ್ತಿದ್ದ. ಅಬ್ಬಾ ಎಂಥಾ ರಭಸ ಅದು!

**ದೇವಾಜಮ್ಮಣ್ಣಿ**— ಹೊನ್ನಮ್ಮ, ಒಮ್ಮೆಲೇ ನಾವು ಪುರುಷರನ್ನು ಹೀಯಾಳಿಸಲು ಬರುತ್ತದೆಯೇ? ಅವಳೂ ಏನಾದರೂ ತಪ್ಪು ಮಾಡಿರಬೇಕು.

**ಹೊನ್ನಮ್ಮ**— ದೇವಿಯವರೇ, ಅವಳು ತಪ್ಪು ಮಾಡಿದ್ದಳೋ ಇಲ್ಲವೋ ನನಗೆ ತಿಳಿಯಲಿಲ್ಲ. ಆದರೆ ಅವಳು ಅವನ ಪಾದದ ಮೇಲೆ ಬಿದ್ದು ನಮಸ್ಕರಿಸಲು ಹೋಗುತ್ತಿದ್ದಳು. ಆದರೂ ಅವಳ ಪತಿ, ಅವಳನ್ನು ತಿರಸ್ಕಾರ ಮಾಡಬೇಕೇ? ಒದೆಯಬೇಕೆ?

**ದೇವಾಜಮ್ಮಣ್ಣಿ**— ಹೊನ್ನಮ್ಮ, ಇದೆಲ್ಲ ಬುದ್ಧಿ ಇಲ್ಲದ ಜನ. ಕೋಪದ ಆವೇಶದಲ್ಲಿ ಏನಾದರೂ ಮಾಡಿಬಿಡುತ್ತಾರೆ.

**ಹೊನ್ನಮ್ಮ**— ಇಂಥ ಪುರುಷರಿಗಾಗಿಯೇ ಮಹಿಳೆಯರು ಬಳಲಬೇಕಾಗಿದೆ, ಬೆಂದು ಬೇಗುದಿಗೊಳ್ಳಬೇಕಾಗಿದೆ. ಒಬ್ಬ ತಾಯಿ ಹೀಗೆ ಬಳಲುತ್ತಿರುವ ತಮ್ಮ ಮಗಳನ್ನು ನೆನೆದು ಹಾಡಿ ಹಾಡಿ ಅಳುತ್ತಿದ್ದಳು.

**ದೇವಾಜಮ್ಮಣ್ಣಿ** — ಏನೆಂದು ಹಾಡುತ್ತಿದ್ದಳು ಹೊನ್ನಮ್ಮ?

**ಹೊನ್ನಮ್ಮ**—

ಹೆಣ್ಣುಮಕ್ಕಳ ಹೆತ್ತು ಹೆರರ ಬಾಳಿಗೆ ಕೊಟ್ಟು ।
ಕಣ್ಣೀರಿಕ್ಕುತ ಮನದಿ ॥
ಉಣ್ಣರೋ ಉಡರೋ ಎನುತ ಚಿಂತಿಸುತಿಹ ।
ಹೆಣ್ಣಿಂದ ಫಲವುಂಟೆ ನಮಗೆ ॥

**ದೇವಾಜಮ್ಮಣ್ಣಿ**— ಮಾತು ಬಹಳ ಚನ್ನಾಗಿ ಹೇಳಿದ್ದಾಳೆ ಹೊನ್ನಮ್ಮ.

ಇಷ್ಟು ಸುಖದಲ್ಲಿರುವ ನನಗೇ, ಹೃದಯ ಕಲಮಲವಾಗುತ್ತದೆಂದ ಮೇಲೆ, ಬಡವರ ಗತಿಯೇನು ?

**ಹೊನ್ನಮ್ಮ**— ಅಹುದು ದೇವಿಯವರೇ. (ಮತ್ತೆ ಅದೇ ನುಡಿಯನ್ನು ಸ್ಮರಿಸುತ್ತ) ಹೆಣ್ಣಿಂದ ಫಲವುಂಟೇ ನಮಗೆ !!........ ಫಲ ಸಿಗಲಿಲ್ಲ ದೇವಿಯವರೇ. ಆದ್ದರಿಂದ ಫಲ ತರಲಿಲ್ಲ.

**ದೇವಾಜಮ್ಮಣ್ಣಿ**— (ನಕ್ಕು) ಅದಕ್ಕೇ ಫಲ ಸಿಗಲಿಲ್ಲವೆಂದು ಹೇಳಿಪೆಯೇನು? ಮಝುರೇ ! ಒಳ್ಳೇ ಜಾಣಳಾಗಿರುವಿ ಹೊನ್ನಮ್ಮ.

**ಹೊನ್ನಮ್ಮ**— ನನಗೆ ಫಲ ಸಿಗುವ ಹಾಗೆ ನೀವು ಮಾಡಬೇಕಾಗಿ ಬೇಡಿ ಕೊಳ್ಳುವೆ, ದೇವಿಯವರೇ.

**ದೇವಾಜಮ್ಮಣ್ಣಿ**— ಅದೇನು ಬೇಕು ನಿನಗೆ ? ಹೇಳು. ಎಲ್ಲವನ್ನೂ ಅನುಕೂಲ ಮಾಡಿಕೊಡುವೆ.

**ಹೊನ್ನಮ್ಮ**— ಅದೇ ! ನೀವು ಆಗಳೆ 'ಜಾಣ' ಳಾಗಿರುವಿ ಎಂದಿರಲ್ಲ ! ನಾನು ನಿಜವಾಗಿಯೂ ಇನ್ನೂ ಜಾಣಳಿಲ್ಲ. ಹೆಣ್ಣಿನ ಬಾಳಿನ ಸಾರ್ಥಕ್ಯ ವನ್ನು ತಿಳಿದುಕೊಳ್ಳಲು ಯತ್ನಿಸಬೇಕೆನ್ನುವೆ. ಅದೇ ನನ್ನ ಆಶೆ.

**ದೇವಾಜಮ್ಮಣ್ಣಿ**— ಅದಕ್ಕೆ ಏನು ಮಾಡಬೇಕೆನ್ನುವಿ ?

**ಹೊನ್ನಮ್ಮ**— ನಮ್ಮ ಒಡೆಯರ ಆಸ್ಥಾನದಲ್ಲಿ ದೊಡ್ಡ ದೊಡ್ಡ ಪಂಡಿತ ರಿದ್ದಾರೆ. ತಿರುಮಲಾರ್ಯರು, ಅಳಸಿಂಗರಾರ್ಯರು ಎಲ್ಲರೂ ಇರು ವರು. ಮಹಾಪಂಡಿತರಾದ ಅಳಸಿಂಗರಾರ್ಯರು ನನಗೇನಾದರೂ ಮಾರ್ಗದರ್ಶನ ಮಾಡಬಹುದು.

**ದೇವಾಜಮ್ಮಣ್ಣಿ**— ಹೊನ್ನಮ್ಮ, ಒಳ್ಳೇ ಯೋಚನೆ ನಿನ್ನದು ! ಒಳ್ಳೇ ಸಾಹಸ ನಿನ್ನದು ! ಇಂಥ ಸ್ತ್ರೀಯರು ಇರುವುದು ತೀರ ಕಡಿಮೆ ನಿನ್ನ ಬಗ್ಗೆ ಆಳಸಿಂಗರಾರ್ಯರಿಗೆ ಹೇಳುತ್ತೇನೆ. ಅವರನ್ನು ಈಗಳೇ ಇಲ್ಲಿಯೇ ಬರಹೇಳಲೇ ?

**ಹೊನ್ನಮ್ಮ**— ಈಗಲೇ ಬೇಡಿ ದೇವಿಯವರೇ ನಾನೇನೋ ನಿಮ್ಮ

ವಾದದ ಊಳಿಗದವಳು ! ನನ್ನಂಥ ಅಲ್ಪಳ ಸಲುವಾಗಿ ಆ ಮಹನೀಯರನ್ನು ಕರೆಸುವದೆಂದರೆ........?

**ದೇವಾಜಮ್ಮಣ್ಣಿ**— ವಿದ್ಯೆ ಇಂಥ ಭೇದಭಾವ ಎಣಿಸುವದಿಲ್ಲ, ಹೊನ್ನಮ್ಮ.

**ಹೊನ್ನಮ್ಮ**— ದೇವಿಯವರೇ, ನೀವೇನೋ ನನ್ನನ್ನು ಕೃಪಾದೃಷ್ಟಿಯಿಂದ ನೋಡುವಿರಿ. ನನ್ನನ್ನು ಮೊದಲಿನಿಂದಲೂ ಸಾಕಿ ಸಲಹಿರುವಿರಿ. ಆದರೆ ಎಲ್ಲರೂ ಇದೇ ದೃಷ್ಟಿಯಿಂದ ನೋಡಬೇಕಲ್ಲ ದೇವಿಯವರೇ ? ನಾನು ಸರಸ್ವತಿಯ ಆರಾಧನೆಯನ್ನು ಬಯಸಿ ಅಳಸಿಂಗರಾರ್ಯರ ಕಡೆ ಹೋದಾಗ, ಜನರು ನನ್ನನ್ನು ಹೀಯಾಳಿಸಬಹುದು. ಯಾವಳೋ ತೊತ್ತು ಇವಳು ಎನ್ನಬಹುದು. ಸಮಾಜದಲ್ಲಿ ಸ್ತ್ರೀಗೆ ಭಯ ಬಹಳ !

**ದೇವಾಜಮ್ಮಣ್ಣಿ**— ಏನೂ ಹೆದರಬೇಡ ಹೊನ್ನಮ್ಮ. ನಮ್ಮ ಆಸ್ಥಾನದಲ್ಲಿ ಎಲ್ಲರಿಗೂ ಮನ್ನಣೆಯಿದೆ. ಕವಿಯಿತ್ರಿ ಶೃಂಗಾರಮ್ಮ ನಮ್ಮಲ್ಲಿ ಇಲ್ಲವೇ ?

**ಹೊನ್ನಮ್ಮ**— ಆದರೂ.... ? ? ?

**ದೇವಾಜಮ್ಮಣ್ಣಿ**— ಏನು ?

**ಹೊನ್ನಮ್ಮ**— ಇದು ಗುಪ್ತವಾಗಿಯೇ ಇರಲಿ. ಸ್ತ್ರೀಜನ್ಮ! ನಾಚಿಗೆ ಬರುತ್ತದೆ. ಭಯ ಬರುತ್ತದೆ. ನಾನು ಮುಂದಾಗುವುದನ್ನು ಕಂಡು ನನ್ನನ್ನು ಮೂಲೆಗುಂಪಾಗಿಸುವ ಗಂಡಸರೂ ಬರಬಹುದು. ಆದುದರಿಂದ ದೇವಿಯವರೇ, ನನಗೆ ಫಲ ಸಿಗುವವರೆಗೆ ಇದು ಯಾರಿಗೂ ತಿಳಿಯದಂತಾಗಲಿ.

**ದೇವಾಜಮ್ಮಣ್ಣಿ**— (ವಿಚಾರಿಸಿ) ಹೂಂ ! ಹೀಗೆಯೇ ಆಗಲಿ. ನೀನು ಒಡೆಯರ ಸಂಚಿಯವಳಾಗು ಸಂಚಿಯ ಹೊನ್ನಮ್ಮಳಾಗು. ಅಂದರೆ ನಿನಗೆ ಅನುಭವ ಇನ್ನೂ ಹೆಚ್ಚಾಗುವುದು. ಪಂಡಿತರ ಪರಿಚಯ ವಾಗುವುದು. ಅದರಿಂದ ಜ್ಞಾನದ ಸಂಚಯವಾಗುವುದು, ಸಂಚಿಯ ಹೊನ್ನಮ್ಮ.......... ಗುರುಗಳಾದ ಅಳಸಿಂಗರಾರ್ಯರಿಗೂ ನಿನಗೆ ವಿದ್ಯೆ ಕಲಿಸುವಂತೆ ಹೇಳುವೆ.

**ಹೊನ್ನಮ್ಮ**— (ಆನಂದದಿಂದ) ದೇವಿಯವರ ಉಪಕಾರವನ್ನು ಎಷ್ಟೆಂದು ವರ್ಣಿಸಲಿ! ಆಹಾ!........ "ಚಿಕದೇವರಾಜ ಚಂದ್ರಮನ ಪಟ್ಟದ ರಾಣಿ ಸಕಲ ಸದ್ಗುಣ ಸಂಪನ್ನೆ........"

[ ಈ ಸಾಲನ್ನು ಹೊನ್ನಮ್ಮ ಗುಣಗುಣಿಸುತ್ತ ಹೋಗಹತ್ತುವಳು. ದೇವಾಜಮ್ಮಣ್ಣಿ ಕುತೂಹಲದಿಂದ, ಆನಂದದಿಂದ ನೋಡಹತ್ತುವಳು. ಆಗ ಪರದೆ ಬೀಳುವುದು. ]

## ದೃಶ್ಯ ೨

( ಶ್ರೀರಂಗಪಟ್ಟಣದ ಅರಮನೆಯಲ್ಲಿಯ ವಿಹಾರ ಉಪವನದ ಒಂದು ದಾರಿ. ಸಂಜೆಯ ಸಮಯ. ಗುರುಗಳಾದ ಅಳಸಿಂಗರಾರ್ಯರು, ಶಿಷ್ಯಳಾದ ಹೊನ್ನಮ್ಮನ ಕೂಡ ಸಂಭಾಷಿಸುತ್ತ ಅಲೆಯುತ್ತಿದ್ದಾರೆ. )

**ಅಳಸಿಂಗರಾರ್ಯ**— (ನಗುತ್ತ) ಹ್ಞ! ಹ್ಞ! ಏನೆಂದಿ ಹೊನ್ನಮ್ಮ, ಮೈಸೂರು ಹೇಗಾಯಿತು?

**ಹೊನ್ನಮ್ಮ**— ಶೂರರು ಈ ಮಹಿಯಲ್ಲಿ ನೆಲೆಸಿದ್ದರಿಂದ. ಅದಕ್ಕೇ ಇದು ಮಹಿಶೂರಪುರ!

**ಅಳಸಿಂಗರಾರ್ಯ**— ಒಳ್ಳೇ ವಿಚಾರ! ಹಲವು ವರ್ಷಗಳಲ್ಲಿಯೆ ನಿನ್ನ ಬುದ್ಧಿ ಚುರುಕಾಗಿದೆ! ಸರಸ್ವತಿ ನಿನ್ನ ನಾಲಗೆಯ ಮೇಲೆ ನಲಿಯುತ್ತಿದ್ದಾಳೆ!

**ಹೊನ್ನಮ್ಮ**— ಹಾಗೇನೂ ಇಲ್ಲ, ಗುರುಗಳೇ........ (ಹಳೆಯ ಸಂಗತಿ ಸ್ಮರಿಸಿ) ಮೊನ್ನೆ ನೀವು ಉತ್ತರರಾಮಚರಿತದಲ್ಲಿಯ ಒಂದು ಶ್ಲೋಕವನ್ನು ಹೇಳುತ್ತಿದ್ದಿರಿ.

**ಅಳಸಿಂಗರಾರ್ಯ**— ಅಹುದು.- "ನೈಸರ್ಗಿಕೀ ಸುರಭಿಣಃ ಕುಸುಮಸ್ಯ ಸಿದ್ಧಾ ಮೂರ್ಧ್ನಿ ಸ್ಥಿತಿರ್ನ ಚರಣೈರವತಾಡನಾನಿ!"

**ಹೊನ್ನಮ್ಮ**— ಅಳಸಿಂಗರಾರ್ಯರೇ, ನನಗೆ ಆ ಸಾಲು ಬಹಳ ರುಚಿಸಿದವು. ಅದನ್ನು ಕನ್ನಡದಲ್ಲಿ ಬರೆದಿರುವೆ.

**ಅಳಸಿಂಗರಾರ್ಯ—** ನಿನಗೆ ನೆನಪಿದ್ದರೆ ಆ ಸಾಲುಗಳನ್ನು ಹೇಳು ನೋಡೋಣ.

**ಹೊನ್ನಮ್ಮ—** ಪೊಸಪೂವ ಸರಗೈದು ಮುಡಿಯದೆ ನಲುಗಿಸಿ ರಸದೆಗೆವೆಸಕ ವೆನಿಪುದು !

**ಅಳಸಿಂಗರಾರ್ಯ—** ಹೊನ್ನಮ್ಮ, ನಿನ್ನ ಭಾಷೆ ಬಹು ಸರಳವಾಗಿದೆ ! ಸುಂದರ ವಾಗಿದೆ ! ಇದನ್ನು ನೀನು ಸರಾಗವಾಗಿ ಅನ್ನಬಲ್ಲೆಯಾ ?

**ಹೊನ್ನಮ್ಮ—** ಓಹೋ ! (ಸರಾಗವಾಗಿ ಹಾಡುವಳು)

ಪೊಸಪೂವ ಸರಗೈದು ಮುಡಿಯದೆ ನಲುಗಿಸಿ
ರಸದೆಗೆವೆಸಕವೆನಿಪುದು !

**ಅಳಸಿಂಗರಾರ್ಯ—** ಹೊನ್ನಮ್ಮ, ನಿನ್ನ ನಾಲಗೆ ಸರಸ್ವತಿಯ ವೀಣೆಯಾಗಿದೆ. ನೀನು ಬೇಗ ನಮ್ಮ ಕನ್ನಡದ ಹೊನ್ನಾಗುವಿ

**ಹೊನ್ನಮ್ಮ—** ಎಲ್ಲದಕ್ಕೂ ತಮ್ಮ ಆಶೀರ್ವಾದ ಗುರುಗಳೇ. ನನ್ನ ಹೃದ ಯುವು ನಟ್ಟಿರುಳಿನ ಆಕಾಶವಾಗಿತ್ತು. ಅದಕ್ಕೆ ನೀವೇ ಚಂದ್ರಮನಾಗಿ ಬಂದಿರಿ, ಗುರುಗಳೆ. ರಾಮಾಯಣ, ಮಹಾಭಾರತ, ಶಾಕುಂತಲ ಎಲ್ಲ ವನ್ನು ಓದಲು ಹೇಳಿದವರು ನೀವೇ. ಈ ಕಥೆಗಳಲ್ಲಿ ಸ್ತ್ರೀಯು ಪಟ್ಟ ಕಷ್ಟಗಳು ನನ್ನ ಎದೆ ಕೊರೆಯುತ್ತಿವೆ. (ಉದ್ವೇಗದಿಂದ) ರಾಮನು ಎಷ್ಟು ಸಲ ಸೀತೆಯನ್ನು ಪರೀಕ್ಷಿಸಿದ ? ದುಷ್ಯಂತನು ಶಕುಂತಲೆ ಯನ್ನು ಹೇಗೆ ಪೀಡಿಸಿದ ? ನಮ್ಮ ಸಮಾಜದ ನೀತಿ ಇನ್ನೂ ಸುಧಾರಿ ಸಿಲ್ಲ.

**ಅಳಸಿಂಗರಾರ್ಯ—** ಹೊನ್ನಮ್ಮ, ನೀನು ಹೇಳಿದ ಮಾತುಗಳು ಸತ್ಯಯುತ ವಾಗಿವೆ. ನಿನ್ನಲ್ಲಿ ಅನುಭವದ ಪರಿಪಕ್ವತೆ ಎಷ್ಟು ಇರುವುದು ! ಹೆಣ್ಣಿನ ಜೀವನದ ಬಗ್ಗೆ ಎಷ್ಟು ಕಳಕಳಿ ಇರುವುದು !

**ಹೊನ್ನಮ್ಮ—** ಪೆಣ್ಣು ಪೆಣ್ಣು ಎಂದು ಎಲ್ಲರೂ ಕೀಳುಗಳೆಯುತ್ತಾರೆ. ಕರುಣೆ ಯಿಂದ ನೋಡುವ ಕರುಳು ತೀರ ಕಡಿಮೆ. ಪ್ರತಿನಿತ್ಯದ ಜೀವನದ ಕುಲುಮೆಯಲ್ಲಿ ಹೆಂಗಸು ಬೆಂದು ಬೇಗುದಿಗೊಳ್ಳುತ್ತಿದ್ದಾಳೆ.

**ಅಳಸಿಂಗರಾರ್ಯ—** ಹೊನ್ನಮ್ಮ, ಈ ಕುರುಡು ಸಮಾಜಕ್ಕೆ ಕಣ್ಣು ಕೊಡಲು ಒಂದು ಅಮರವಾದ ಕಾವ್ಯ ಬರೆ. ನಿನ್ನ ಕವಿತ್ವದ ಸಾಮರ್ಥ್ಯದಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ.

**ಹೊನ್ನಮ್ಮ—** ಅಳಸಿಂಗರಾರ್ಯರೇ, ನನ್ನದು ಎಂಥ ಕಾವ್ಯಶಕ್ತಿ ! ಏನೋ ಯತ್ನಿಸುವೆ. ಗುರುಗಳ ಆಶೀರ್ವಾದ ನನಗಿರಲಿ. ಬರುತ್ತೇನೆ

[ ಹೊನ್ನಮ್ಮ ತೆರಳುವಳು. ಹೊನ್ನಮ್ಮನಲ್ಲಿ ಹೊಸ ಶಕ್ತಿಯನ್ನು ಕಂಡ ಅಳಸಿಂಗರಾರ್ಯರು ಆನಂದದಿಂದ, ಮುಗುಳುನಗೆಯಿಂದ ಶತಪಥವಿಡುತ್ತಿರುತ್ತಾರೆ. ಅಷ್ಟರಲ್ಲಿ ಸಂಜೆಯ ವಿಹಾರಕ್ಕೆಂದು ಹೊರಟ ಚಿಕದೇವರಾಜರು ಅಳಸಿಂಗರಾರ್ಯರನ್ನು ಕಾಣುವರು. ]

**ಚಿಕದೇವರಾಜ—** ಏನು ಅಳಸಿಂಗರಾರ್ಯರೇ, ಏನೋ ಹೊಸ ವಸ್ತು ದೊರೆತಂತೆ ಆನಂದದಿಂದ ಓಡಾಡುತ್ತಿರುವಿರಿ ? ಯಾವ ನಾಟಕದ ಸನ್ನಿವೇಶ ನಿಮಗೆ ಹೊಳೆದಿದೆ ?

**ಅಳಸಿಂಗರಾರ್ಯ—** ಪ್ರಭುಗಳೇ, ನಿಮ್ಮ ದೇಶವು ಸಂಗೀತದ ಆಗರವಾಗಿದೆ. ಎಲ್ಲ ಕಲೆಗಳ ತವರುಮನೆಯಾಗಿದೆ. ನರ್ತಕಿಯರು, ಸಂಗೀತಗಾರರು, ಶೂರರು, ಕವಿಗಳು, ಕವಿಯಿತ್ರಿಯರು ಎಲ್ಲರೂ ನಿಮ್ಮ ಛತ್ರಛಾಯೆಯಲ್ಲಿ ಇದ್ದಾರೆ. ನಿಮಗೆ ಬಹಳಷ್ಟು ಅನುಭವವಿದೆ ಆದರೂ ನಿಮಗೆ ಗೊತ್ತಿಲ್ಲದ ಒಂದು ವಿಚಿತ್ರ ಸಂಗತಿ ನಾನು ಕಂಡಿರುವೆ.

**ಚಿಕದೇವರಾಜ—** ಯಾವುದು ಅದು ಅಳಸಿಂಗರಾರ್ಯರೇ ? ಅಂಥ ಹೊಸ ಸಂಗತಿ ಯಾವುದು ?

**ಅಳಸಿಂಗರಾರ್ಯ—** ಕಾಗೆ ಕೋಗಿಲೆಯಾಯಿತು ! ಒಂದು ಕಲ್ಲು ರತ್ನವಾಯಿತು !

**ಚಿಕದೇವರಾಜ—** ಏನು ಹೇಳುವಿರಿ ಅಳಸಿಂಗರಾರ್ಯರೇ ? ಎಲ್ಲಿ ನೋಡಿದಿರಿ ?

**ಅಳಸಿಂಗರಾರ್ಯ—** ಇಲ್ಲಿಯೇ !

**ಚಿಕದೇವರಾಜ—** ಶ್ರೀರಂಗಪಟ್ಟಣದ ಯಾವ ಓಣಿಯಲ್ಲಿ ಇದು ಸಂಭವಿಸಿತು ?

**ಅಳಸಿಂಗರಾರ್ಯ**— ಓಣಿಯಲ್ಲಿ ಅಲ್ಲ....... ನಮ್ಮ ಅರಮನೆಯಲ್ಲಿ.

**ಚಿಕದೇವರಾಜ**— (ಆಶ್ಚರ್ಯದಿಂದ) ಏನಿದು ವಿಚಿತ್ರ ಸಂಗತಿ! ನನಗೆ ಇನ್ನೂ ಹೇಗೆ ತಿಳಿಯಲಿಲ್ಲ? ನನ್ನ ಕಣ್ಣುಗಳನ್ನು ನಾನು ನಂಬಬಹುದೇ? ಏನು ಏನಾಯಿತು?

**ಅಳಸಿಂಗರಾರ್ಯ**— ಇದೇ ಈಗ ಹೇಳಿದೆನಲ್ಲ ಪ್ರಭುಗಳೇ. ಕಲ್ಲು ರತ್ನವಾಯಿತು, ಕಾಗೆ ಕೋಗಿಲೆಯ ಹಾಗೆ ಹಾಡಿತು.

**ಚಿಕದೇವರಾಜ**— ಎಲ್ಲಿ? ಯಾವ ಹೊತ್ತಿನಲ್ಲಿ?

**ಅಳಸಿಂಗರಾರ್ಯ**— ಇಲ್ಲಿಯೇ ಮಹಾರಾಣಿಯವರ ಕರುಮಾಡದಲ್ಲಿ.

**ಚಿಕದೇವರಾಜ**— ದೇವಾಜಮ್ಮಣ್ಣಿ ಈ ಸುದ್ದಿಯನ್ನು ನನಗೆ ಹೇಳಿಯೇ ಇಲ್ಲ.

**ಅಳಸಿಂಗರಾರ್ಯ**— ಅಂತೆಯೇ ನಾನು ಹೇಳುತ್ತಿರುವೆ. ಪ್ರಭುಗಳ ಎದುರಿನಲ್ಲಿ ನನ್ನ ಸ್ಪಷ್ಟ ಅಭಿಪ್ರಾಯ ಹೇಳುತ್ತಿರುವೆ. ಕವಿಯಿತ್ರಿ ಕಂತಿಯ ಜೀವನ ಮಹಾರಾಜರಿಗೆ ಗೊತ್ತು.

**ಚಿಕದೇವರಾಜ**— ಅಹುದು, ಆವಳು ಒಬ್ಬ ತೊತ್ತಾಗಿದ್ದಳು. ಆಮೇಲೆ ತನ್ನ ವಿದ್ಯಾಬಲದಿಂದ ಕವಿಯಿತ್ರಿಯಾದಳು.

**ಅಳಸಿಂಗರಾರ್ಯ**— ನಾನೂ ಅದನ್ನೇ ಹೇಳುತ್ತಿರುವುದು. ನಮ್ಮ ಆಸ್ಥಾನದಲ್ಲಿಯೂ ಹಾಗೆಯೇ ಆಗಿದೆ ಅದೇ ಸೋಜಿಗದ ಸಂಗತಿ!

**ಚಿಕದೇವರಾಜ**— ಇದೇನು? ನಿಮ್ಮ ಮೊದಲ ಮಾತಿಗೂ ಇದಕ್ಕೂ ಏನೂ ಸಂಬಂಧ ಹತ್ತಲಿಲ್ಲ, ಅಳಸಿಂಗರಾರ್ಯರೇ.

**ಅಳಸಿಂಗರಾರ್ಯ**— ಮಹಾರಾಣಿಯವರ ಊಳಿಗದವಳು ಶ್ರೇಷ್ಠ ಕವಿಯಿತ್ರಿಯಾಗಿದ್ದಾಳೆ. ಏನೂ ಬುದ್ಧಿಯಿಲ್ಲದ ಕಲ್ಲು ಅವಳು ಮೊದಲಿದ್ದಳು. ಈಗ ಅವಳೇ ವಿದ್ಯಾರತ್ನೆಯಾಗಿದ್ದಾಳೆ.

**ಚಿಕದೇವರಾಜ**— (ನಗುತ್ತ) ಹೀಗೋ! ನಿಮ್ಮ ಗೂಢಾರ್ಥ ಈಗ ಹೊಳೆಯಿತು! ಕಾಗೆ ಕೋಗಿಲೆ ಎಂದು ಹೇಳಿದಿರಿ. ಅಂದರೆ ಅವಳು ಚೆನ್ನಾಗಿ ಹಾಡುವಳೆ?

**ಅಳಸಿಂಗರಾರ್ಯ—** ಅವಳು ಸಾಂಗತ್ಯದಲ್ಲಿ ಬಹು ಸರಸವಾಗಿ ಹಾಡುತ್ತಾಳೆ

**ಚಿಕದೇವರಾಜ—** ಯಾರು ಅವಳು ?

**ಅಳಸಿಂಗರಾರ್ಯ—** ಹೊನ್ನಮ್ಮ!

**ಚಿಕದೇವರಾಜ—** ( ಅತ್ಯಾಶ್ಚರ್ಯದಿಂದ ) ಹೊನ್ನಮ್ಮ! ಸಂಚಿಯ ಹೊನ್ನಮ್ಮಳೇ ? ?

**ಅಳಸಿಂಗರಾರ್ಯ—** ಅಹುದು ಪ್ರಭುಗಳೇ, ಸಂಚಿಯ ಹೊನ್ನಮ್ಮ!

**ಚಿಕದೇವರಾಜ—** ಅಳಸಿಂಗರಾರ್‍ಯರೇ, ನನಗೆ ಈವರೆಗೂ ಹೇಗೆ ಗೊತ್ತಾಗಿಲ್ಲ? ಅವಳು ಸರಸ್ವತಿಯ ಹೊನಾಗ್ನಿರುವಳೆಂದ ಮೇಲೆ ನನಗೆ ಹೇಗೆ ಗೊತ್ತಾಗಲಿಲ್ಲ ?

**ಅಳಸಿಂಗರಾರ್ಯ—** ಅಹುದು ! ಅವಳು ಎಲೆಯ ಮರೆಯ ಹೂವಿನಂತೆ ಇದ್ದಾಳೆ. ಕಾಡುಮಲ್ಲಿಗೆಯಂತೆ ಇದ್ದಾಳೆ. ಅವಳ ಹೃದಯ ಬಲು ಕೋಮಲವಾಗಿದೆ.

**ಚಿಕದೇವರಾಜ—** ದೇವಾಜಮ್ಮಣ್ಣಿ ನನಗೆ ಈ ಸುದ್ದಿ ತಿಳಿಸಬೇಕಾಗಿತ್ತು. ಕಲಾಭೂಮಿಯಲ್ಲಿ ಯಾವ ಹೂವೇ ಅರಳಲಿ, ನಾನು ಅದನ್ನು ಅಭಿಮಾನದಿಂದ ಪ್ರೀತಿಸುತ್ತೇನೆ. ನನಗೆ ಇದರ ಪರಿಮಳ ಹೇಗೆ ತಾಗಲಿಲ್ಲ ?

**ಅಳಸಿಂಗರಾರ್ಯ—** ಅಹುದು ಪ್ರಭುಗಳೇ, ತನ್ನ ಯತ್ನದ ಫಲ ಸಿಗುವ ವರೆಗೆ ಮರೆಯಾಗಿಯೇ ಇರಬೇಕೆಂದು ಅವಳ ಹಂಬಲವಿದ್ದಿತಂತೆ. ಈ ಸುದ್ದಿಯನ್ನು ಮಹಾರಾಣಿಯವರೇ ನನಗೆ ತಿಳುಹಿಸಿದ್ದರು. ಆದುದರಿಂದಲೆ ನಾನು ನಿಮ್ಮ ಎದುರಿಗೆ ಈ ಮಾತು ತೆಗೆದಿರಲಿಲ್ಲ.

**ಚಿಕದೇವರಾಜ—** ಇರಲಿ, ಅಳಸಿಂಗರಾರ್‍ಯರೇ, ಈಗಳಾದರೂ ಅವಳು ಹೇಳುವ ಕಾವ್ಯ ಕೇಳುವೆ. ಈಗಳೇ ಅಂತಃಪುರಕ್ಕೆ ಕರೆಯಿಸುವೆ.

**ಅಳಸಿಂಗರಾರ್ಯ—** ಆದರೆ........? ಅವಳು ಭಯಾಕುಲೆ ! ಲಜ್ಜೆಯ ನಿಧಿ ! ಆದುದರಿಂದ ನೀವೇ ರಾಣೀವಾಸಕ್ಕೆ ಹೋಗಿ ಕೇಳಿದರೆ, ಕಾವ್ಯದ ರುಚಿ ಗೊತ್ತಾಗುವುದು.

**ಚಿಕದೇವರಾಜ—** ಹಾಗೆಯೇ ಆಗಲಿ.

## ದೃಶ್ಯ ೩

[ ದೇವಾಜಮ್ಮಣ್ಣಿಯವರ ಅಂತಃಪುರ. ಮಧ್ಯಾಹ್ನದ ಸಮಯ. ಅದೇ ಭೋಜನ ಮುಗಿಸಿ, ಚಿಕದೇವರಾಜರು ಮಹಾರಾಣಿಯೊಡನೆ ಕುಳಿತಿದ್ದಾರೆ. ಪರಿಮಳ ಸುತ್ತಲೂ ಹಬ್ಬಿಕೊಂಡಿದೆ. ಮಹಾರಾಜ ಮಹಾರಾಣಿಯವರ ತಾಂಬೂಲ ಸೇವನೆ ನಡೆದಿದೆ. ನರ್ತಕಿಯರು, ಸಂಗೀತಗಾರರು, ಕಲಾವಿದರು ಕುಳಿತುಕೊಂಡಿದ್ದಾರೆ. ]

**ಚಿಕದೇವರಾಜ**—ದೇವಾಜಮ್ಮಣ್ಣಿ, ಈ ದಿನವೇನೋ ಮೃಷ್ಟಾನ್ನ ಭೋಜನವಾಯಿತು. ಆದರೆ ಅದೆಲ್ಲ ಹೊಟ್ಟೆಗೆ... ........ಈ ಮನಸ್ಸಿಗೆ ಇನ್ನೂ ಭೋಜನವಾಗಿಲ್ಲ.

**ದೇವಾಜಮ್ಮಣ್ಣಿ**— ಅದರಲ್ಲೇನು ? ಈ ತಾಂಬೂಲವನ್ನು ಸೇವಿಸಿ. ನರ್ತಕಿಯವರಿಗೆ ಆಜ್ಞೆ ಮಾಡುವೆ.

[ ಒಂದು ನಿಮಿಷ ನರ್ತನ. ]

**ಚಿಕದೇವರಾಜ**— ಹೂಂ ! ಹೂಂ ! ಈ ನರ್ತನದಿಂದ ಆನಂದವಿಲ್ಲ. ಬೇರೆ ಏನಾದರೂ ?

**ದೇವಾಜಮ್ಮಣ್ಣಿ**— ಆಗಲಿ ! ನಿಮಗೆ ಪ್ರೀತಿಯುಂಟಾಗುವುದೇ ಆಗಲಿ. ಕೊಳಲು ಬಾರಿಸಿರಿ.

[ ಒಂದು ನಿಮಿಷ ಕೊಳಲು ]

**ಚಿಕದೇವರಾಜ**— ಇದಕ್ಕೂ ಹೆಚ್ಚಾಗಿ ನನಗೆ ಬೇಕಾಗಿದೆ.

**ದೇವಾಜಮ್ಮಣ್ಣಿ**— ನಿಮಗೆ ಏನು ಬೇಕೊ ಹೇಳಿ. ಸಂಗೀತ, ನೃತ್ಯ, ವಾದ್ಯ ಎಲ್ಲವೂ ಸಿದ್ಧವಾಗಿವೆ.

**ಚಿಕದೇವರಾಜ**— ಅಲ್ಲ ದೇವಾಜಮ್ಮಣ್ಣಿ, ಸಂಚಿಯ ಹೊನ್ನಮ್ಮನನ್ನು ಕರೆ.

**ದೇವಾಜಮ್ಮಣ್ಣಿ**— ಅವಳು ಹೇಗೆ ನಿಮ್ಮ ಮನಸ್ಸಿಗೆ ಅಮೃತದೂಟವನ್ನು ಮಾಡಿಸಬಲ್ಲಳು ?

**ಚಿಕದೇವರಾಜ**— ಏಕೆ? ಸಾಹಿತ್ಯವು ಅಮೃತದೂಟವಲ್ಲವೇ? ನೀನು ಅವಳ ಸುದ್ದಿಯನ್ನು ಈವರೆಗೂ ನನಗೆ ಹೇಳಿಲ್ಲ.

**ದೇವಾಜಮ್ಮಣ್ಣಿ**— ನಿಮಗೆ ಯಾರು ಹೇಳಿದರು?

**ಚಿಕದೇವರಾಜ**— ಗುರುಗಳಾದ ಅಳಸಿಂಗರಾರ್ಯರು! ಪರಮಾರ್ಥವಾದಿ ಅಳಸಿಂಗರಾರ್ಯರು.

**ದೇವಾಜಮ್ಮಣ್ಣಿ**— ಹೊನ್ನಮ್ಮನ ಆಶೆ ಯಾರಿಗೂ ಹೇಳಬಾರದೆಂದಿತ್ತು. ಅಳಸಿಂಗರಾರ್ಯರು ಏನೆಂದು ಹೇಳಿದರು ?

**ಚಿಕದೇವರಾಜ**— ಈ ಹೊನ್ನಿ ಸರಸಸಾಹಿತ್ಯದ ವರದೇವತೆಯೆಂದು.

**ದೇವಾಜಮ್ಮಣ್ಣಿ**— ಅಬ್ಬಾ! ಗುರುಗಳೇ ಅವಳ ಬಗ್ಗೆ ಈ ರೀತಿಯಾಗಿ ಹೇಳಿದರೆ?

**ಚಿಕದೇವರಾಜ**— ಹೂಂ! ಇಷ್ಟೇ ಅಲ್ಲ, ಇವಳು ಕಾವ್ಯ ಅಲಂಕಾರ ನಾಟಕಗಳ ಪವಣಿಗೆ ಇರವ ಬಲ್ಲವಳೆಂದೂ ಹೇಳಿದರು.

**ದೇವಾಜಮ್ಮಣ್ಣಿ**— ಓಹೋ!

**ಚಿಕದೇವರಾಜ**— ಆ ಕರ್ಬೊನ್ನು ಚೆಂಬೊನ್ನಾಗಿದೆಯೆಂದೂ ಹೇಳಿದರು.

**ದೇವಾಜಮ್ಮಣ್ಣಿ**— ಅಹುದು, ಅವಳು ದಿನಾಲು ಹಾಡು ಕಟ್ಟಿ ಹಾಡು ತ್ತಿರುತ್ತಾಳೆ.

**ಚಿಕದೇವರಾಜ**— ದೇವಾಜಮ್ಮಣ್ಣಿ, ಈ ದಿನ ಅವಳ ಬಾಯಿಂದ ಕಾವ್ಯ ವನ್ನು ಕೇಳಬೇಕೆಂಬಾಶೆಯಾಗಿದೆ. ಅವಳಿಂದ ಒಂದು ಕವಿತೆ ಹೇಳಿಸು.

**ದೇವಾಜಮ್ಮಣ್ಣಿ**— (ಹೊನ್ನಮ್ಮನನ್ನು ಕರೆಸುವಳು) ಹೊನ್ನಮ್ಮ ಬಾ ಇಲ್ಲಿ, ಮಹಾರಾಜರ ಎದುರಿಗೆ ನೀನು ಕಾವ್ಯ ಹೇಳು. ಬಾ ಹೊನ್ನಮ್ಮ, ಏಕೆ ಇಷ್ಟು ನಾಚಿಕೆ? ಹೊನ್ನೀ ಇಲ್ಲಿ ಬಾ. ಇತ್ತ ಬಾ ಹೊನ್ನಕ್ಕ. ಕಂದ ಬಾ, ಕಟ್ಟಾಣಿ ಬಾ, ಪೆಣ್ಮಣಿ ಬಾ........

**ಹೊನ್ನಮ್ಮ**— ದೇವಿಯವರೇ, ನಾನು ಏತೆರದವಳು ? ನನಗೆಲ್ಲಿ ಅಂಥ ಕಾವ್ಯಶಕ್ತಿಯಿದೆ ?

**ದೇವಾಜಮ್ಮಣ್ಣಿ**— ಈ ನಾಚಿಕೆ ಏತಕೆ? ಕಲಿತ ವಿದ್ಯೆಯನ್ನು ಬಲ್ಲವರೆದುರಿಗೆ ಇಡುವಲ್ಲಿ ಫಲವುಂಟು. ನಿನ್ನ ಮನಸ್ಸು ಕೋಮಲವಿದ್ದಂತೆ, ನಿನ್ನ ಕಾವ್ಯವೂ ಕೋಮಲವಿರಬೇಕು. ಪಂಡಿತಮಂಡಲಿಗೆ ಅದೇ ಸೊಗಸು. ದೊರೆಯಾಜ್ಞೆಯಾಗಿದೆ. ಕಾವ್ಯ ಬಿತ್ತರಿಸಿ ಕೀರ್ತಿ ಪಡೆ ಹೊನ್ನಕ್ಕ.

**ಹೊನ್ನಮ್ಮ**— ದೇವಿಯವರೇ, ನಿಮ್ಮ ಒಲವೇ ಒಲವು. ನಿಮ್ಮ ಆಜ್ಞೆಯೆ ಆಜ್ಞೆ. ಆದರೆ ಈ ಹೊನ್ನಿಯ ಕಾವ್ಯ ಲಘು ಕಾವ್ಯ. ಇದರಲ್ಲಿ ಹದಿನೆಂಟು ವರ್ಣನೆಗಳಿಲ್ಲ, ಇಂಥದನ್ನು ಹೇಗೆ ಹೇಳಲಿ ?

**ಚಿಕದೇವರಾಜ**— ಕಾವ್ಯಕ್ಕೆ ಕಟ್ಟುನಿಟ್ಟುಗಳಿಲ್ಲ. ಹೇಳು ಹೊನ್ನಮ್ಮ.

**ಹೊನ್ನಮ್ಮ**— ಇದು ಹದಿಬದೆಯರ ಕಾವ್ಯ. ಹಿರಿಯರು ಹೇಳಿದ್ದನ್ನೆ ಹೇಳುವೆ.

**ದೇವಾಜಮ್ಮಣ್ಣಿ**— ಹೇಳು ಹೊನ್ನಮ್ಮ, ಸ್ತ್ರೀಧರ್ಮವನ್ನು ಕುರಿತೇ ಹೇಳು. ಗಂಡಸರು ಅದನ್ನು ಕೇಳಬಾರದೇಕೆ ?

**ಹೊನ್ನಮ್ಮ**— ಈ ಜಗತ್ತಿನಲ್ಲಿ ಸ್ತ್ರೀಯರನ್ನು ನಿಂದಿಸುವುದು ಬಹು ಹೀನವಾದ ಮಾತು. ನಮ್ಮ ಜನತೆ ಇನ್ನೂ ಈ ಮಾತು ತಿಳಿದುಕೊಂಡಿಲ್ಲ. ಸ್ತ್ರೀಯೇ ನಿಜವಾಗಿಯೂ ಜಗದ ಉದ್ಧಾರಕಳು.

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ ? ಪೆಣ್ಣಲ್ಲವೆ ಪೊರೆದವಳು?
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು?
ಕುವರನಾದೊಡೆ ಬಂದ ಗುಣವೇನದರಿಂದ, ಕುವರಿಯಾದೊಡೆ
ಕುಂದೇನು ?
ಇವರಿರ್ವರೊಳೇಳ್ಗೆವಡೆದವರಿಂದ ಸವನಿಪುದಿಹಪರ ಸೌಖ್ಯ.

**ಚಿಕದೇವರಾಜ**— ಆಹಾ ! ಕಾವ್ಯ ಸರಸವಾಗಿದೆ ! ಸುಂದರವಾಗಿದೆ ! ಒಂದು ಅಗಳನ್ನು ಹಿಚುಕಿದರೆ, ಅನ್ನವಾಗಿರುವುದು ತಿಳಿಯುವುದಂತೆ ! ಇಷ್ಟರಿಂದಲೇ ನಾನು ಇವಳಲ್ಲಿ ಅಪೂರ್ವ ಪ್ರತಿಭೆಯಿದೆಯೆಂದು ಹೇಳ

ಬಲ್ಲೆ ದೇವಾಜಮ್ಮಣ್ಣಿ. ಅಳಸಿಂಗರಾರ್ಯರು ಇವಳನ್ನು ರತ್ನವೆಂದು ಕರೆದದ್ದು ಯಥಾಯೋಗ್ಯ.

**ದೇವಾಜಮ್ಮಣ್ಣಿ**— ನೋಡಿ. ಇವಳು ಹೇಗೆ ತನ್ನ ಸ್ವಪ್ರಯತ್ನದಿಂದಲೇ ಪ್ರಕಾಶ ಕಂಡಳು ! ತನ್ನ ಹುಟ್ಟಿದೂರಾದ ಎಳಂದೂರದಲ್ಲಿಯೇ ಉಳಿದಿದ್ದರೆ, ಇವಳ ಗತಿ ಏನಾಗುತ್ತಿತ್ತೋ !

**ಹೊನ್ನಮ್ಮ**— ಅನಾಥಳಾದ ನನಗೆ ನಿಮ್ಮ ಸಹಾಯವೇ ದೊಡ್ಡದು. ಚಿಕ್ಕಂದಿನಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡ ನನಗೆ, ನೀವೇ ತಂದೆ ತಾಯಿಗಳು !

**ದೇವಾಜಮ್ಮಣ್ಣಿ**— ಆದರೂ ಹೊನ್ನಮ್ಮ, ನಿನ್ನ ಹಂಬಲ, ನಿನ್ನ ಆಶೆ ಸಾಮಾನ್ಯವೇ ? ಎಲ್ಲರಿಗೂ ಸಾಧ್ಯವೇ ? ಸ್ತ್ರೀಜನ್ಮ ವ್ಯರ್ಥವೇ ?

**ಚಿಕದೇವರಾಜ**— ಎಂದಿಗೂ ವ್ಯರ್ಥವಿಲ್ಲ. ಹೊನ್ನಮ್ಮ ಇದೀಗ ಹೇಳಿದ ಕಾವ್ಯ ಸ್ತ್ರೀಗೀತವೇ. ದೇವಾಜಮ್ಮಣ್ಣಿ, ಇವಳಿಗೆ ಬಹು ಬೆಲೆಯುಳ್ಳ ಬಹುಮಾನ ಕೊಡು. ಇವಳು ನಮ್ಮ ಆಸ್ಥಾನದ ಕವಯಿತ್ರಿಯಾಗಿ ಬೆಳಗಲಿ.

**ದೇವಾಜಮ್ಮಣ್ಣಿ**— ಹಾಗೆಯೇ ಆಗಲಿ; ಹೊನ್ನಮ್ಮ, ಈಗಲಾದರೂ ನಿನ್ನ ಆಶೆ ಕೊನರಿತೆ ? ಫಲ ದೊರಕಿತೇ ?

**ಹೊನ್ನಮ್ಮ**— ಬಹುಮಾನ, ಫಲ ಏನೂ ಬೇಡ ಪ್ರಭುಗಳೇ, ದೇವಿಯವರೆ. ನಿಮ್ಮ ಒಲವೆ ನನಗೆ ಬಹುಮಾನ, ಫಲ ಎಲ್ಲವೂ !! ನಿಮ್ಮ ಪಾದಧೂಳಿಯಲ್ಲಿ ನಾನು ಬಳೆದಿದ್ದೇನೆ. ನಿಮ್ಮ ಆಶೀರ್ವಾದ ನನಗಿರಲಿ. ನಮ್ಮ ಜನರು ಈ ಕಾವ್ಯ ಓದಿ, ಸ್ತ್ರೀಯರ ಬಗ್ಗೆ ಒಳ್ಳೇ ಭಾವನೆ ತಳೆದರೆ ಸಾಕು. ಅದೇ ನನ್ನ ಜನುಮದ ಫಲ.

# ಮಾಯೆಯ ಮೋಹ

[ ಚಾಮರಸ ಬರೆದ "ಪ್ರಭುಲಿಂಗಲೀಲೆ"ಯಲ್ಲಿ ಮಾಯೆಯ ಮೋಹದ ಕಥೆ ಬರುತ್ತದೆ. ಆ ಕಥೆಯನ್ನಷ್ಟೆ ಆಯ್ದುಕೊಂಡು, ನಾಟಕ ರೂಪದಲ್ಲಿ ಕೊಟ್ಟಿದೆ ಚಾಮರಸ ಮಹಾಕವಿ ನಿರೂಪಿಸಿದಂತೆಯೆ ಕಥಾಸರಣಿಯಿದ್ದು, ಚಾಮರಸನ ಭಾಷೆಯನ್ನೆ ಬಳಸಿಕೊಂಡಿದೆ. ]

ಪಾತ್ರಗಳು :

| | | | |
|---|---|---|---|
| ೧. | ಮಮಕಾರ | — | ಬನವಾಸಿ ದೇಶದ ಪ್ರಭು |
| ೨. | ಮೋಹಿನಿ | — | ಮಮಕಾರನ ರಾಣಿ |
| ೩. | ಮಾಯೆ | — | ಮಮಕಾರ ಮತ್ತು ಮೋಹಿನಿಯರ ಮಗಳು |
| ೪. | ಅಲ್ಲಮ | — | ಮದ್ದಲಿಗ |
| ೫. | ಮದಮಾನಿ | — | ಮಾಯೆಯ ಸಖಿಯರು |
| ೬. | ಸಕಳೆ | | |
| ೭. | ವಿಮಳೆ | — | ಗಿರಿಜೆಯ ದೂತಿ |

ಸ್ಥಳ : ಬನವಾಸಿ ದೇಶ

# ದೃಶ್ಯ ೧

[ ಬನವಾಸೆಯ ಮಧುಕೇಶ್ವರ ದೇವಾಲಯದ ರಂಗಮಂಟಪ. ಮಾಯಾದೇವಿ ತನ್ನ ಸಖಿಯಾದ ಮದಮಾನಿ ಮತ್ತು ಸಕಳೆಯರನ್ನು ಕೂಡಿಕೊಂಡು ಮಧುಕೇಶ್ವರನ ಪ್ರತಿನಿತ್ಯದ ಪೂಜೆಗಾಗಿ ಬಂದಿದ್ದಾಳೆ. ರಂಗಮಂಟಪದಲ್ಲಿ ಮಾಯಾದೇವಿ ಬಹು ಭಕ್ತಿಯಿಂದ ನೃತ್ಯ ಮಾಡುತ್ತಿದ್ದಾಳೆ. ನೃತ್ಯಸೇವೆ ಮುಗಿಯುತ್ತ ಬಂದಂತೆ, ಒಮ್ಮೆಲೆ ಹೊರಗಿನಿಂದ ಮದ್ದಳೆಯ ಧ್ವನಿ ಹಲವು ವಿಧವಾಗಿ ಕೇಳಬರುತ್ತದೆ. ಆಗ ಮಾಯಾದೇವಿ ತನ್ನ ನೃತ್ಯವನ್ನು ನಿಲ್ಲಿಸಿ ಬೆರಗಾಗಿ ಕೇಳುತ್ತಾಳೆ. ]

**ಮಾಯೆ**— ( ಸಖಿಯರಾದ ಮದಮಾನಿ ಮತ್ತು ಸಕಳೆಯರ ಹತ್ತಿರ ಓಡಿಬಂದು ಆಶ್ಚರ್ಯದಿಂದ ) ಮದಮಾನಿ, ಸಕಳೆ, ಕೇಳಿದಿರಾ ಈ ಧ್ವನಿಯನ್ನು ?

**ಮದಮಾನಿ**— ಮಾಯಾದೇವಿ, ನಿಮ್ಮ ನೃತ್ಯದ ಎದುರಿಗೆ ಈ ಧ್ವನಿ ಎಲ್ಲಿಯದು ?

**ಮಾಯೆ**— ಹಾಗೆನ್ನಬೇಡ ಮದಮಾನಿ. ನನ್ನ ನೃತ್ಯದ ತಾಳಕ್ಕೆ ತಕ್ಕಂತೆ ಧ್ವನಿಯಿದೆ. ಯಾವುದೋ ಹೊಸ ಧ್ವನಿ ! ಯಾವುದೋ ಅಪೂರ್ವವಾದ ಧ್ವನಿ !!

**ಸಕಳೆ**— ಮಾಯಾದೇವಿ, ಈ ಧ್ವನಿಯನ್ನು ಕೇಳಿ, ನೀವು ನೃತ್ಯಸೇವೆಯನ್ನು ಪೂರ್ಣಗೊಳಿಸಲಿಲ್ಲ. ಮಧುಕೇಶ್ವರನಿಗೆ ಆರತಿಯನ್ನು ಬೆಳಗಲಿಲ್ಲ.

[ ಮತ್ತೆ ಮದ್ದಳೆಯ ಧ್ವನಿ ]

**ಮಾಯೆ**—ಸಕಳೆ, ನೀನನ್ನುವುದು ನಿಜ. ಆದರೆ ಈ ಮದ್ದಳೆಯನ್ನು ಬಾರಿಸುವವರು ಯಾರು ? ಆಹಾ ! ಅದೆಂಥ ಮಧುರವಾದ ಧ್ವನಿ ! ಸಕಳೆ, ಬೇಗ ಹೋಗಿ ನೋಡಿಕೊಂಡು ಬಾ. ಅವನು ಯಾರು ? ಅದನ್ನು ತಿಳಿದುಕೊಂಡ ಮೇಲೆಯೆ ದೇವರಿಗೆ ಆರತಿ ಬೆಳಗೋಣ.

**ಸಕಳೆ**— ಆಜ್ಞೆ ದೇವಿಯವರೆ.

[ ಸಕಳೆ ಮದ್ದಲಿಗನನ್ನು ನೋಡಲು ಹೋಗುವಳು. ]

**ಮದವಮಾನಿ**— ಈ ಮದ್ದಳೆಯ ಬಾರಿಸುವಿಕೆಯಲ್ಲಿ ನಾನಾ ಪರಿಯ ತಾಳ ಸಮೇಳ ಪದ್ಧತಿಗಳಿವೆ. ಈ ಮದ್ದಲಿಗ ಎಷ್ಟು ವಿಧವಾಗಿ, ಅಂದವಾಗಿ ಬಾರಿಸುತ್ತಿದ್ದಾನೆ ನೋಡಿ.

**ಮಾಯೆ**— ಅಹುದು ಮದವಮಾನಿ. ಪರಮೇಶ್ವರನೇ ತನ್ನ ಡಮರುಗವನ್ನು ಹಿಡಿದು ಬಾರಿಸಿದಂತೆ ನನಗೆ ಭಾಸವಾಗುತ್ತಿದೆ.

**ಮದವಮಾನಿ**— ನಿಮ್ಮ ನೃತ್ಯಸೇವೆಗೆ ವಾದ್ಯ ಬಾರಿಸಿ ನೆರವಾಗಲು ಪರ ಮೇಶ್ವರನೇ ಏಕೆ ಬರಬಾರದು ? ಅವನು ಭಕ್ತರ ಬಾಕುಳಿ.

**ಮಾಯೆ**— ಮದವಮಾನಿ, ನನ್ನ ಮನಸ್ಸನ್ನೇ ನೀನು ನುಡಿದೆ. ಆದರೆ ಪರ ಮೇಶ್ವರ ಹೀಗೆ ಬೇಗ ಒಲಿಯುವನೆ ?

**ಸಕಳೆ**— ( ಪ್ರವೇಶಿಸಿ ) ಮಾಯಾದೇವಿ, ಅವನು ಪರಮೇಶ್ವರನಲ್ಲ. ಒಬ್ಬ ಮದ್ದಲಿಗ.

**ಮದವಮಾನಿ**— ( ನಕ್ಕು ) ಅದು ನಮಗೆ ತಿಳಿಯದೇ ? ಮುಂದೆ ?

**ಮಾಯೆ**— ಅವನಾರು ? ಎಲ್ಲಿಯವನು ? ಹೇಗೆ ಇದ್ದಾನೆ ? ಇವುಗಳನ್ನು ತಿಳಿದುಕೊಂಡೆಯಾ ?

**ಸಕಳೆ**— ಮಾಯಾದೇವಿ, ಆವನು ಅಪರೂಪನಾಗಿದ್ದಾನೆ ! ಸುಂದರನಾಗಿ ದ್ದಾನೆ ! ಹೆರಹಿಂಗಬಾರದ ಚೆಲುವಿನ ಮುಖವಿದೆ. ಹೊಳೆಯುವ ಕಣ್ಣು, ಉಂಗುರುಗೂದಲು, ತುರುಬು, ಚಿಮ್ಮುರಿ ಇವುಗಳಿಂದ.... ...

**ಮಾಯೆ**—( ವಾಕ್ಯ ಪೂರ್ಣಮಾಡುತ್ತ ) ಸೊಬಗಿನ ಬೀಡಾಗಿದ್ದಾನೆ. ಮೊದಲ ನೋಟದಲ್ಲಿ ಎಷ್ಟು ವರ್ಣಿಸುತ್ತಿ ಅವನನ್ನು, ಸಕಳೆ ?

**ಸಕಳೆ**— ಅಹುದು ಮಾಯಾದೇವಿ, ಚೆಲುವೇ ರೂಪತಾಳಿ ಬಂದಂತೆ ಅವನು ನಿಂತಿದ್ದಾನೆ. ರೂಪಕ್ಕೆ ಅನುಗುಣವಾಗುವಂತೆ ಬಂಗಾರದ ಒಡವೆ ಧರಿಸಿದ್ದಾನೆ. ಶೋಭಿಸುವ ಗಂಧ ಲೇಪಿಸಿದ್ದಾನೆ.

**ಮಾಯೆ**— ನಿನ್ನ ವರ್ಣನೆ ನನಗೆ ಅತೃಪ್ತಿಯಾಗಿದೆ. ಆ ಚೆಲುವ ಮದ್ದಲಿಗ ನನ್ನು ಇಲ್ಲಿಗೇ ಕರೆದುಕೊಂಡು ಬಾ.

**ಸಕಳೆ**— ಆಜ್ಞೆ ದೇವಿಯವರೇ.

**ಮದಮಾನಿ**— ( ಸಕಳೆ ಹೊರಡುತ್ತಿರುವಾಗ ಅವಳನ್ನು ನಿಲ್ಲಿಸಿ ) ಸಕಳೆ ನಿಲ್ಲು. ನಾನೂ ಅವನನ್ನು ನೋಡುವೆ. ನೋಡಿ ಕರೆದುಕೊಂಡು ಬರುವೆ

[ ಮದಮಾನಿ ಹೋಗುವಳು. ]

**ಸಕಳೆ**— ಮಾಯಾದೇವಿ, ಅವನ ಮದ್ದಳೆ ಮಾಟಾಗಿ ಮುದ್ದಾಗಿದೆ. ಅವನು ಬಾರಿಸುವಾಗ ಬೆರಳಿನ ಉಗುರುಗಳೂ ಹೊಳೆಯುತ್ತಿವೆ.

**ಮಾಯೆ**— ಸಕಳೆ, ನೀನು ಜಾಣೆ. ಒಂದು ನಿಮಿಷದ ನೋಟದಲ್ಲಿ ಎಷ್ಟು ವಿವರವಾಗಿ ನೋಡಿರುವೆ ! ನಿನ್ನ ಈ ಬಣ್ಣನೆಯಿಂದ ನನ್ನ ಕಾತುರತೆ ಮತ್ತಿಷ್ಟು ಹೆಚ್ಚುತ್ತಿದೆ.

**ಸಕಳೆ**— ಮದ್ದಳೆಯ ಧ್ವನಿಯನ್ನು ಕೇಳಿ, ಕಾರಮುಗಿಲಿನ ಗರ್ಜನೆಯನ್ನು ಕಿವಿಯಾರೆ ಕೇಳಿದ ನೋಗೆಯಂತೆ ನೀವು ನಿಂತದ್ದನ್ನು ನಾವು ನೋಡಿದ್ದೇವೆ. ಅಂದಮೇಲೆ ನಿಮ್ಮ ಕಾತುರತೆ ಹೆಚ್ಚಾಗದೇ ಏನು ?

[ ಮದಮಾನಿ ಮದ್ದಲಿಗನನ್ನು ಕರೆದುಕೊಂಡು ಬರುವಳು. ]

**ಮದಮಾನಿ**— ಮಾಯಾದೇವಿ, ಬಾಗಿಲ ಮುಂದೆ ಬಾರಿಸುತ್ತಿದ್ದ ಮದ್ದಲಿಗ ಇವನೇ. ಇವನು ಯಾರು ? ಎಲ್ಲಿಯವ ? ಯಾವದೂ ಗೊತ್ತಿಲ್ಲ. ನೀವೇ ಕೇಳಿಕೊಳ್ಳಬಹುದು.

**ಸಕಳೆ**— ( ಮಾಯಾದೇವಿ ನಾಚಿ ಸುಮ್ಮನೇ ಮೌನವಾಗಿ ಇರುವುದನ್ನು ಕಂಡು ಮದ್ದಲಿಗನಿಗೆ ) ನೀನು ನಮ್ಮ ಬನವಾಸಿಯ ದೇಶದವನೆಂದು ಕಾಣುವದಿಲ್ಲ. ಯಾವ ದೇಶದಿಂದ ಇಲ್ಲಿಗೆ ಬಂದಿರುವಿ ? ನಿನ್ನ ದೇಶ ಯಾವುದು ?

**ಅಲ್ಲಮ**— ನಿಮಗೆ ನನ್ನ ದೇಶ ಹೇಳಬೇಕೆ ? ನನ್ನ ದೇಶ ಪರದೇಶ.

**ಸಕಳೆ**
**ಮದಮಾನಿ** — ( ಆಶ್ಚರ್ಯದಿಂದ ) ಪರದೇಶ !!

**ಮದಮಾನಿ**— ಅಂದರೆ ಸ್ವರ್ಗಲೋಕದಿಂದ ಬಂದಿದ್ದೀಯಾ ?........ಇರಲಿ, ನಿನ್ನ ಹೆಸರಾದರೂ ಏನು ?

**ಅಲ್ಲಮ**— ಬಿರುದಿನ ಬಿಂಕಕಾರರನ್ನು ಅಲ್ಲ ಎನಿಸುವ ಹೆಸರು ನನಗೆ. ನನ್ನನ್ನು ಅಲ್ಲಮ ಎಂದು ಕರೆಯುತ್ತಾರೆ.

**ಸಕಳೆ**— ಓಹೋ ! ಒಳ್ಳೇ ಹೆಸರು. ನೀನು ನೆಲೆಗೊಂಡ ಠಾವು ಯಾವುದು?

**ಅಲ್ಲಮ**— ನಾವು ಸುಖವಾಸಿಗಳು. ದೇಶಾಟನೆಯ ಮಾಡುವವರು.

**ಮದಮಾನಿ**— ಒಳ್ಳೆಯದಾಯಿತು. ನೀನು ಅಲ್ಲಿಗೆ ತಿರುಗುವ. ಬುದ್ಧಿಯನ್ನು ಬಿಟ್ಟುಬಿಡು. ಹೇಗಾದರೂ ಸುಖವಾಸಿ. ಇಲ್ಲಿಯೇ ಇದ್ದುಬಿಡು.

**ಸಕಳೆ**— ಮನಬಂದಂತೆ ನೀನು ಇಲ್ಲಿಯೇ ಇರಬಹುದು. ನಮ್ಮ ಒಡತಿಗೆ ಬೇಕಾದ ವಿದ್ಯಾವಸ್ತುಗಳನ್ನು ಕಲಿಸುತ್ತ ನೀನು ಬೇಕಾದ ಹಾಗೆ ಇಲ್ಲಿ ವಾಸವಾಗಿರಬಹುದು.

**ಮಾಯೆ**— ( ಮದಮಾನಿಯನ್ನು ಬೇರೆಯಾಗಿ ಕರೆದುಕೊಂಡು ಹೋಗಿ ) ಮದಮಾನಿ, ನಮ್ಮ ಮಾತಿಗೆ ತಂದೆಯ ಒಪ್ಪಿಗೆ ಬೇಡವೇ ?

**ಮದಮಾನಿ**— ಮಾಯಾದೇವಿ, ನೀವು ಪ್ರೀತಿಯ ರಾಜಕುಮಾರಿ. ನಿಮ್ಮ ಬಯಕೆಗೆ ಪ್ರಭುಗಳು ಒಪ್ಪಿಗೆ ಕೊಡುವದಿಲ್ಲವೇ?.... ...( ಮಮಕಾರ ಬರುತ್ತಿರುವುದನ್ನು ನೋಡಿ ) ಓಹೋ ! ಅರಸುವ ಬಳ್ಳಿ ಕಾಲ್ತೊಡಕಿದಂತೆ ಮಮಕಾರ ಪ್ರಭುಗಳು ಇತ್ತಕಡೆಗೇ ಬರುತ್ತಿದ್ದಾರೆ. ಮಾಯಾದೇವಿ ಅವರಿಗೆ ಈಗಳೇ ಇಲ್ಲಿಯೇ ಅರಿಕೆ ಮಾಡಿಕೊಳ್ಳೋಣ.

[ ಮಮಕಾರ ಪ್ರಭುಗಳ ಆಗಮನ ]

**ಮಮಕಾರ**— ಇದೇನು ಮಾಯಾ ? ಈ ದಿನ ಎಷ್ಟು ಹೊತ್ತಿನವರೆಗೆ ದೇವಾಲಯದಲ್ಲಿಯೆ ನಿಂತಿರುವಿ ? ಮಧುಕೇಶ್ವರನ ಭಕ್ತಿಯಲ್ಲಿ ಅರಮನೆಯ ನೆನಪೇ ಆಗಿಲ್ಲವೇನು ?

**ಮದಮಾನಿ**— ಪ್ರಭುಗಳೇ, ಈ ದಿನ ಒಬ್ಬ ಮದ್ದಲಿಗ ಇಲ್ಲಿಗೆ ಬಂದಿದ್ದಾನೆ. ಆವನ ಮದ್ದಳೆಯನ್ನು ಕೇಳುತ್ತ ನಾವಿಲ್ಲಿ ನಿಂತುಕೊಂಡಿದ್ದೇವೆ.

**ಸಕಳೆ**— ( ಮುಂದೆ ಬಂದು ) ಇವನೇ ಆ ಮದ್ದಲಿಗ. ಇವನು ಬಹಳ ಅಪೂರ್ವವಾಗಿ ಮದ್ದಳೆಯನ್ನು ಬಾರಿಸುತ್ತಾನೆ. ಇವನ ಹೆಸರು ಅಲ್ಲಮ.

**ಮಮಕಾರ**— ಅಲ್ಲಮ, ನಿನಗೆ ಬೇರೆ ಯಾವ ವಿದ್ಯೆ ಗೊತ್ತಿದೆ ?

**ಅಲ್ಲಮ**— ನಾನು ಭರತಾದಿ ಎಲ್ಲ ವಿದ್ಯೆಗಳನ್ನು ಬಲ್ಲೆ.

**ಮದಮಾನಿ**— ನಮ್ಮ ಮಾಯಾದೇವಿ ಆ ವಿದ್ಯೆಗಳನ್ನು ಕಲಿಯಬೇಕೆನ್ನುತ್ತಾಳೆ.

**ಮಮಕಾರ**— ಅಲ್ಲಮ, ನೀನು ಮಾಯಾದೇವಿಗೆ ಎಲ್ಲವನ್ನೂ ಕಲಿಸ ಬಲ್ಲೆಯಾ ?

**ಅಲ್ಲಮ**— ಆಗಬಹುದು !

**ಮಾಯೆ**— ( ಆನಂದದಿಂದ ನಿಟ್ಟುಸಿರುಬಿಟ್ಟು) ಮದಮಾನಿ, ನಕಳೆ, ಇಂದಿನಿಂದಲೇ ಇವರು ಬರಲಷ್ಟೇ ?

**ಮಮಕಾರ**—ಆಗಲಿ ಮಾಯಾ, ನಾಗವಾಸಕ್ಕೆ ಕರೆದುಕೊಂಡು ಹೋಗಿರಿ. ಅಲ್ಲಿಯ ನೆರವಿಗೆ ಅಲ್ಲಮ ಸಂತೋಷವನ್ನುಂಟುಮಾಡಲಿ.

**ಮದಮಾನಿ**— ಪ್ರಭುಗಳೇ, ಕನ್ನೆಮಾಡದ ಚೌವಾಳಿಗೆಯಲ್ಲಿ ಪ್ರತಿದಿನ ಅಲ್ಲಮ ವಿದ್ಯೆ ಕಲಿಸುವಂತೆ ಅಪ್ಪಣೆ ಕೊಡಿಸಬೇಕಾಗಿ ಬಿನ್ನಹ.

**ಮಮಕಾರ**— ಹಾಗೆಯೇ ಆಗಬಹುದು.

## ದೃಶ್ಯ ೨

[ ಕನ್ನೆಮಾಡದ ಚೌಪಾಳಿಗೆ ಹೋಗುವ ದಾರಿ. ಸನಿಹದಲ್ಲಿರುವ ಚೌಪಾಳಿಗೆಯಿಂದ ನೃತ್ಯದ ಧ್ವನಿ ಕೇಳುತ್ತಿದೆ. ಅಲ್ಲಮ ತಾಳಹಾಕಿ ನೃತ್ಯದ ಮಾರ್ಗದರ್ಶನ ಮಾಡುತ್ತಿದ್ದಾನೆ. ಮದಮಾನಿ ಮತ್ತು ಸಕಳೆಯರು ಏನೋ ಉಪಾಯವನ್ನು ಯೋಚಿಸುತ್ತ ದಾರಿಯಲ್ಲಿ ನಿಂತಿದ್ದಾರೆ. ]

**ಸಕಳೆ**— ಮದಮಾನಿ, ನಮ್ಮ ಒಡತಿಯ ಚಿಂತೆಯ ಪರಿಹಾರಕ್ಕೆ ಏನಾದರೂ ಉಪಾಯ ಹುಡುಕಲೇಬೇಕು.

**ಮದಮಾನಿ**— ಮಾಯಾದೇವಿ ಎರಡು ಮೂರು ದಿನಗಳಿಂದ ಏನೂ ಮಾತನಾಡಲೊಲ್ಲರು. ಕೈಕದಂಪಿನಿಂದ ಮೌನವಾಗಿ ಕುಳಿತುಬಿಡುತ್ತಿದ್ದಾರೆ.

**ಸಕಳೆ**— ನಾವು ಎದುರಿಗೆ ಇರುವಾಗ ಹಾಗೆ! ಅದೇ ಈಗ... ....ನೋಡು! ಅಲ್ಲಮ ಬಂದಿರುವಾಗ ಹೇಗೆ ಉತ್ಸಾಹದಿಂದ ನರ್ತನ ಮಾಡುತ್ತಿದ್ದಾರೆ.

**ಮದಮಾನಿ**— ಸಕಳೆ, ನನಗೂ ಇದರ ಅರ್ಥವಾಗಿದೆ. ಅಲ್ಲಮನನ್ನೇ ಒಮ್ಮೆ ಮಾತಾಡಿಸಿ ನೋಡಬೇಕು.

**ಸಕಳೆ**— ಈ ಮಾತೆಲ್ಲ ಸರಿ. ಆದರೆ ಮಾಯಾದೇವಿಯವರು ಈ ವಿಚಾರವನ್ನು ನಮ್ಮ ಮುಂದೆ, ಗೆಳತಿಯರಾದ ನಮ್ಮ ಮುಂದೆ, ಏಕೆ ಸ್ಪಷ್ಟವಾಗಿ ಹೇಳಬಾರದು?

**ಮದಮಾನಿ**— ನೀನೆಂಥ ಹುಚ್ಚಿ ಸಕಳೆ, ನೀನಾದರೂ ಇಂಥ ಮಾತು ಸ್ಪಷ್ಟ ಹೇಳುವಿಯಾ?...........ನೋಡು; ಮನದ ನಾಚಿಕೆ, ಜನಪತಿಯ ಮಗಳು ಎಂಬ ಹೆಮ್ಮೆ, ಸಮಸಂಪ್ರಾಪ್ತನು ಅಲ್ಲದ ಪುರುಷನನ್ನು ಆಶಿಸಿದೆ ಎಂಬ ಹೆದರಿಕೆ ಇವೆಲ್ಲವುಗಳಿಂದ ಮಾಯಾದೇವಿ ನಾಚುತ್ತಿದ್ದಾರೆ. ಇದು ನಮಗೆ ತಿಳಿಯದೇ?

**ಸಕಳೆ**— ಹಾಗಾದರೆ ಏನು ಮಾಡಬೇಕೆನ್ನುವಿ?

**ಮದಮಾನಿ**— ಕಲಾವಿದನಾದ ಅಲ್ಲಮನನ್ನೆ ವಿಚಾರಿಸೋಣ.

**ಸಕಳೆ**— ಕಲಾವಿದನೋ? ಕಾಮುವಿದನೋ?

**ಮದಮಾನಿ**— ವಿದ್ಯೆಯನ್ನು ಕಲಿಸುವ ಭರದಲ್ಲಿ, ಇದೆಂಥ ಕಾರ್ಯ ಸಾಧಿಸಿದ್ದಾನೆ..........ಏನೇ ಇರಲಿ ಸಕಳೆ, ಮಾಯಾದೇವಿಗೆ ಸಮಾಧಾನವಾಗುವುದು ಮುಖ್ಯ. ಅಲ್ಲಮನು ನಿಜವಾಗಿ ಮಾಯಾದೇವಿಯರನ್ನು ಪ್ರೀತಿಸುವನೋ ಇಲ್ಲವೋ ಎಂಬುದನ್ನು ವಿಚಾರಿಸೋಣ.

**ಸಕಳೆ**— ಅವನೋ ಪರದೇಶಿ, ಬಡವ! ರಾಜಕುಮಾರಿ ದೊರೆಯುವಳೆಂದರೆ ಒಪ್ಪಿಗೆ ಕೊಡದೇ ಬಿಡುವನೇ! ಅವನು ಒಮ್ಮೆಲೇ "ಹೂಂ" ಎಂದರೆ ನೀನು ಏನು ಮಾಡುವಿ?

**ಮದಮಾನಿ**— ಲಗ್ನ ಮಾಡುವೆ.

**ಸಕಳಿ**— ಮದಮಾನಿ, ಎಂಥ ಹುಚ್ಚಿ ನೀನು. ಎಂಥ ಕೃತ್ಯಕ್ಕೆ ಕೈಹಾಕುವೆ? ಮಮಕಾರ ನೃಪತಿಗಳು ನಮಗೆ ಏನೆಂದಾರು? ಮೋಹಿನಿರಾಣಿ ನಮ್ಮನ್ನು ಬೈಯ್ದು, ಹೊಡೆದು ಹೊರಗೆ ಹಾಕಲಿಕ್ಕಿಲ್ಲವೆ? ಜನರು ನಮಗೆ ಏನೆಂದಾರು?

**ಮದಮಾನಿ**— ಸ್ನೇಹ ಹೆಚ್ಚೋ, ಉಳಿದ ಮಾತುಗಳು ಹೆಚ್ಚೋ? ಸಕಳಿ, ನೀನೆ ತೂಗಿ ನೋಡು. ಮಾಯಾದೇವಿ ಬೇಟದಲ್ಲಿ ದಿನದಿನವೂ ಕೋಟಲೆಗೊಳ್ಳುತ್ತ ಬಾಡಿಬೆಂಡಾಗಿದ್ದಾಳೆ. ಅವಳಿಗೆ ಜೀವಕಳೆಯನ್ನು ಕೊಡುವ ಅಲ್ಲಮನು ಬೇಡವೇ? ಸಕಳಿ, ನಾನಂತೂ ಈಗ ನಿರ್ಧಾರಕ್ಕೆ ಬಂದಿದ್ದೇನೆ.

**ಸಕಳಿ**— ಯಾವ ನಿರ್ಧಾರಕ್ಕೆ?

**ಮದಮಾನಿ**— ಅಲ್ಲಮನು ಈಗ ಈ ದಾರಿಯಲ್ಲಿ ಬರುವ ಹೊತ್ತಾಗಿದೆ. ಅವನನ್ನು ನೇರವಾಗಿ ಕೇಳುವೆ. ಅವನ ಮನವೊಲಿಸಿ ಈ ದಿನ ರಾತ್ರಿ ಮಾಯಾದೇವಿಯವರ ಶಯ್ಯಾಗೃಹಕ್ಕೆ ಕರೆದುಕೊಂಡು ಬರುವೆ.

**ಸಕಳಿ**— (ಅಂಜಿಕೆಯಿಂದ) ಎಂಥ ಕೃತಿ! ಮದಮಾನಿ, ನನಗಂತೂ ಹೆದರಿಕೆ ಬರುತ್ತದೆ. ನಾನು ಇಲ್ಲಿ ನಿಲ್ಲಲಾರೆ; ಹೋಗುವೆ.

**ಮದಮಾನಿ**— ನೀನು ಹೋಗಬಹುದು—ಧೈರ್ಯವಿರದಿದ್ದರೆ. ಆದರೆ ಅಲ್ಲಮನನ್ನು ಕರೆದುಕೊಂಡು ಬಂದ ಮೇಲಾದರೂ ನನ್ನೊಡನೆ ಸಹ ಕರಿಸುವಿಯಷ್ಟೇ?

**ಸಕಳಿ**— ಓಹೋ! ಅಷ್ಟು ಮಾಡುವೆ.

[ ಸಕಳಿ ಹೋಗುವಳು. ನೃತ್ಯದ ಧ್ವನಿ ನಿಲ್ಲುತ್ತದೆ. ಇನ್ನೊಂದು ಬದಿಯಿಂದ ಅಲ್ಲಮ ಪ್ರವೇಶಿಸುವನು. ]

**ಮದಮಾನಿ**— ನಿಲ್ಲು ಅಲ್ಲಮ. ನಿನ್ನ ಕೂಡ ಕೆಲವೊಂದು ಆಲೋಚನೆ ಮಾಡಬೇಕಾಗಿದೆ.

**ಅಲ್ಲಮ**— ಯಾವ ಗೂಢವಾದ ಆಲೋಚನೆ ಅದು ಮದಮಾನಿ?

**ಮದಮಾನಿ**— ನೋಡು, ನಿನಗೆ ಹೇಗೂ ಮನೆಯಿಲ್ಲ. ಆದ್ದರಿಂದ ಇನ್ನು ಮೇಲೆ ಅರಮನೆಯಲ್ಲಿಯೇ ಇದ್ದು ಬಿಡು.

**ಅಲ್ಲಮ**— ಅಂದರೆ ಈ ಅರಸನ ಮನೆಯಲ್ಲಿಯೇ ?

**ಮದಮಾನಿ**— ಹೊಂ! ಈ ಆರಸನ ಮನೆಯಲ್ಲಿ ಅಂದರೆ ನಿನ್ನ ರಾಣಿಯ ಮನೆಯಲ್ಲಿ........

**ಅಲ್ಲಮ**— ಅಂದರೆ, ಮದಮಾನಿ, ಏನು ಅನ್ನುತ್ತಿರುವೆ ?

**ಮದಮಾನಿ**— ಅದೇ ಆದೆ ವಿಚಾರ. ನಿನ್ನಲ್ಲಿ ಮಾಯೆಗೆ ಮೋಹವುಂಟಾಗಿದೆ. ಆದ್ದರಿಂದಲೇ ರಾಣಿಯ ಮನೆಗೆ ಬಂದುಬಿಡು ಎಂದು ಹೇಳಿದ್ದು.

**ಅಲ್ಲಮ**—( ನಕ್ಕು ) ನನ್ನಲ್ಲಿ ಮೋಹ !........( ಮತ್ತೆ ನಕ್ಕು ) ಛೀ ! ನಾವು ಬಡವರು; ನಿಮ್ಮ ದೇವಿ ರಾಜಕುಮಾರಿ! ನಾವು ಪರದೇಶಿ, ನೀವು ದೊರೆಗಳು ! ನಾವು ಪುರುಷವೇಷಿಗಳು; ನೀವು ಸತಿಯರು !........... ದೂರದಿಂದ ಸೇವೆ ಮಾಡುವುದೇ ನಮಗೆ ಯೋಗ್ಯ.

**ಮದಮಾನಿ**— ಅಲ್ಲಮ, ಇದು ನಸುನಕ್ಕು ಮರೆಯುವ ಮಾತಲ್ಲ. ಮಾಯಾದೇವಿ ನಿನ್ನನ್ನು ಸೇವಕ ಎಂಬ ದೃಷ್ಟಿಯಿಂದ ನೋಡುವದಿಲ್ಲ. ನಿನ್ನಿಂದಲೇ ತನ್ನ ಜೀವ ಉದ್ಧಾರವಾಗಬೇಕೆಂದು ಹಂಬಲಿಸುತ್ತಿರುವಳು.

**ಅಲ್ಲಮ**-- ಒಡತಿಯಾದವರು ಹೀಗೆ ಪ್ರೀತಿಸಿ ಮೋಹ ಮಾಡುವುದು ಅವರಿಗೆ ಸಹಜ. ಆದರೆ ನಾವು ನಮ್ಮ ಸೇವಕಾಂಗದ ಭಾವದಿಂದಲೇ ಇರಬೇಕು.

**ಮದಮಾನಿ**— ಅಲ್ಲಮ, ಸಾಕುಮಾಡು ಈ ಜಾಣತನದ ಮಾತುಗಳನ್ನು. ಯಾರನ್ನೂ ಲೆಕ್ಕಿಸದ ಮಾಯಾದೇವಿ ತಾನಾಗಿಯೇ ನಿನಗೆ ಸೋತು ಬಂದಿದ್ದಾಳೆ.

**ಅಲ್ಲಮ**— ನಿಮ್ಮ ಮಾಯಾದೇವಿಯ ಅಂತಸ್ಥವನ್ನು ನೀವೇ ಬಲ್ಲಿರಿ. ನಾವು ಏನಾದರೂ ಹೊಸಬರು. ನಿಮ್ಮ ಮನಸ್ಸು ಬಂದಂತೆ ನೀವು ಮಾಡಬೇಕು.

**ಮದಮಾನಿ**— ಅಲ್ಲಮ, ಯಾವ ಮೋಹನ ವಿದ್ಯೆಯನ್ನು ಕಲಿತಿರುವೆ ? ನಮ್ಮ ದೇವಿಯನ್ನು ಮರುಳು ಮಾಡಿದೆ. ನೀನು ಸಾಮಾನ್ಯನಲ್ಲ. ಇನ್ನು ಇಲ್ಲಿಯೇ ಇರು........ನಮ್ಮ ಮಾಯಾದೇವಿ ಇದ್ದೆಡೆಗೆ ನಡೆ.

## ದೃಶ್ಯ ೩

[ ಕನ್ಯಾಂತಃಪುರದ ಮಾಯಾದೇವಿಯ ಶಯ್ಯಾಗೃಹ. ಸಡಗರವಾದ ಶಯ್ಯಾಗೃಹದಲ್ಲಿ ವಸ್ತುಗಳು ಚದರಿಬಿದ್ದಿವೆ. ಮಾಯೆ ಕೂದಲು ಹರವಿಕೊಂಡು ಚಿಂತಾಕ್ರಾಂತಳಾಗಿ ಹಾಸುಗೆಯ ಮೇಲೆ ಕುಳಿತಿದ್ದಾಳೆ. ಸಕಳೆ ಮತ್ತು ಮದಮಾನಿ ಪ್ರವೇಶಿಸಿ, ಅವಳ ಪರಿಸ್ಥಿತಿಯನ್ನು ಕಂಡು ಕಳವಳಗೊಳ್ಳುತ್ತಾರೆ. ]

**ಮದಮಾನಿ**— ಮಾಯಾದೇವಿ, ಏನು ಏನಾಯಿತು ? ಅಲ್ಲಮನು ಇಲ್ಲಿ ಕಾಣುವದಿಲ್ಲ ? ಏನಾಯಿತೆ ಮಾಯಾದೇವಿ ?

**ಮಾಯೆ**— ಮದಮಾನಿ, ಏನು ಹೇಳಲಿ ? ತಮವು ತರಣಿಯನ್ನು ಅಪ್ಪಿಕೊಂಡಂತಾಯಿತು.

**ಸಕಳೆ**— ಅಂದರೆ ಆ ಮದ್ದಲಿಗ ಎಲ್ಲಿ ಹೋಗಿದ್ದಾನೆ ?

**ಮಾಯೆ**— ಮಿಂಚಿನಂತೆ ಕಣ್ಣಿಗೆ ಕಾಣುತ್ತಾರೆ; ಆದರೆ ಕೈಗೆ ಸಿಗುವದಿಲ್ಲ. ಅಯ್ಯೋ ನನಗೆ ಎಂತಹ ಅಪಮಾನ ? ಎಂತಹ ಹುಚ್ಚಿ ನಾನು ?

**ಸಕಳೆ**— ಮದಮಾನಿಗೆ ನಾನು ಈ ಮಾತನ್ನು ಮೊದಲೇ ಹೇಳಿದೆ. ಅವಳು ಕೇಳಲಿಲ್ಲ. ಇನ್ನು ಜನರೆದುರು ನಾವು ಅವಮಾನಕ್ಕೆ ಈಡಾಗುವೆವು

**ಮದಮಾನಿ**— ಅವನು ಎಲ್ಲಿ ಹೋಗುವನು? ನಮಗೆ ಅಪಮಾನದ ಮಾತು ಬಂದಾಗ, ಅವನು ನಾಲಗೆ ಬಿಡದಂತೆ ನಾನು ನೋಡುವೆ.

**ಮಾಯೆ**— ಮದಮಾನಿ, ಇನ್ನು ಕೈಗೆ ಸಿಲುಕುವದಿಲ್ಲ. ನಾನು ಈ ದುಃಖದ ಬೆಂಕಿಯಲ್ಲಿಯೇ ಸಾಯುವುದು ಖಂಡಿತ.

[ ಅಷ್ಟರಲ್ಲಿ ಮೋಹಿನಿ ಅಲ್ಲಿ ಪ್ರವೇಶಿಸುವಳು. ಚೆಲ್ಲಾಪಿಲ್ಲಿಯಾದ ವಸ್ತುಗಳನ್ನು, ಮಗಳ ಇರುವಿಕೆಯ ರೀತಿಯನ್ನು ನೋಡಿ ಗಾಬರಿಯಾಗುವಳು. ]

**ಮೋಹಿನಿ**— ಮಾಯಾ, ಏನಾಯಿತು ? ಹೀಗೇಕೆ ಕುಳಿತಿರುವೆ ? ಮೈಯಲ್ಲಿ ಚೆನ್ನಾಗಿಲ್ಲವೇ ?

[ ಮಾಯೆ ಮುಖ ಮುಚ್ಚಿಕೊಳ್ಳುವಳು. ತಮ್ಮ ತಪ್ಪನ್ನು ನೆನೆದು ಮದಮಾನಿ ಮತ್ತು ಸಕಳೆ ಬೆದರಿ ದೂರ ಸರಿದು ನಿಲ್ಲುವರು. ]

ಏನಿದು ಮದಮಾನಿ, ಸಕಳೆ ?... ....ವಸ್ತುಗಳು ಹೀಗೇಕೆ ಬಿದ್ದಿವೆ ? ಏನೂ ಅರ್ಥವಾಗುವದಿಲ್ಲವಲ್ಲ ?

**ಮದಮಾನಿ**— ರಾಣಿಯವರೆ; ದಯವಿಟ್ಟು ನಮ್ಮ ತಪ್ಪನ್ನು ಕ್ಷಮಿಸಬೇಕು.

**ಮೋಹಿನಿ**— ಏನದು ? ಸ್ಪಷ್ಟವಾಗಿ ಹೇಳು.

**ಸಕಳೆ**— ಅವನು ಸಿಕ್ಕಲಿಲ್ಲ.

**ಮೋಹಿನಿ**— ಯಾರು ? ಆ ಮದ್ದಲಿಗನೇ ?

**ಮದಮಾನಿ**— ಅಹುದು. ನಮ್ಮ ಮಾಯಾದೇವಿಯವರಿಗೆ ಬೇಕಾದವನು.

[ ಮುಖ ಮುಚ್ಚಿಕೊಂಡ ಮಾಯೆ ದುಃಖಿಸುವಳು. ಅದನ್ನು ಮೋಹಿನಿ ಕಂಡು ಎಲ್ಲವನ್ನು ಅರ್ಥಮಾಡಿಕೊಳ್ಳುವಳು. ಮಾಯಾದೇವಿಯ ಹತ್ತಿರ ಕುಳಿತು, ಅವಳನ್ನು ರಮಿಸುತ್ತ ...... .. ]

**ಮೋಹಿನಿ**— ಮದಮಾನಿ, ಸಕಳೆ, ಸ್ತ್ರೀಯರು ನೀವು ಇಷ್ಟು ಸ್ವತಂತ್ರದಿಂದ ವರ್ತಿಸಬೇಕೆ ?............ತಿಳಿಯಿತು ! ಎಲ್ಲವೂ ತಿಳಿಯಿತು........... ( ಅಧಿಕಾರದಿಂದ... ) ಈ ಎಲ್ಲ ವಸ್ತುಗಳನ್ನು ಚೆನ್ನಾಗಿ ಇಡಿ ( ಮದಮಾನಿ ಮತ್ತು ಸಕಳೆ ಗಾಬರಿಯಾಗಿ ವಸ್ತುಗಳನ್ನು ನೀಟಾಗಿ ಇಡುವರು. ) ಸ್ವಲ್ಪ ಹೊರಗೆ ನಿಲ್ಲಿರಿ. ಯಾರನ್ನೂ ಒಳಗೆ ಬಿಡಬೇಡಿ. ( ಮದಮಾನಿ ಮತ್ತು ಸಕಳೆ ಹೋದುದನ್ನು ನೋಡಿ ) ಮಾಯಾ, ನಿನಗಾಗಿ ಇಲ್ಲದಿರುವ ಆಶೆಯನ್ನು ಮಾಡಬೇಕೆ ? ರಾಜಕುಲದಲ್ಲಿ ನಗೆಯಾಡುವಂತೆ ಮಾಡಬೇಕೆ ? ನಿನ್ನ ತಂದೆ ಇದನ್ನು ಕೇಳಿದರೆ ಸುಮ್ಮನಿರುವರೆ ? ಮಾಯಾ, ಎಂಥ ದಿಶೆ ನಿನಗೆ ಬಂದಿತು ? ಎಲ್ಲಿಯ ಅಲ್ಲಮ ? ಸೇವಕರನ್ನು ಹೀಗೆ ಪ್ರೀತಿಸಬೇಕೆ ? ( ಮಾಯಾ ಬಹಳ ಮೌನವಾಗಿಯೇ ಇರುವದನ್ನು ಕಂಡು...) ಏಳು ಮಾಯಾ. ಒಳಗೆ ನಡೆ. ಇನ್ನು ಮುಂದೆ ಆ ಮದ್ದ

ಲಿಗನನ್ನು ನೆನೆಯಬೇಡ....ಏನು? ಎಲ್ಲದಕ್ಕೂ ಮೌನವಾಗಿರುವಿ........ ಹಾಗಾದರೆ ನಿನ್ನ ಇಚ್ಛೆ ಬಂದಂತೆ ಇರು........ನಿನ್ನ ತಂದೆ ಕೋಪಗೊಂಡರೆ, ನನಗೆ ತಿಳಿಯದು. ( ಮದಮಾನಿ ಮತ್ತು ಸಕಳೆಯರನ್ನು ಕೂಗಿದ ಕೂಡಲೇ ಅವರು ಒಳಗೆ ಬರುವರು. )ಮದಮಾನಿ, ಸಕಳೆ, ಇನ್ನು ಮುಂದೆ ಆ ಮದ್ದಲಿಗನನ್ನು ಅರಮನೆಗೆ ಕರೆತರಬೇಡಿ. ಅವನ ಬಿಡಾರ ಅವರಮನೆಯ ಹೊರಗೇ ಇರಲಿ. ಪುರಜನರು ನಗೆಯಾಡದಂತೆ ನೋಡಿಕೊಳ್ಳಿರಿ.

[ ಮೋಹಿನಿ ಮಾಯೆಯನ್ನು ಕರೆದುಕೊಂಡು ಒಳಗೆ ಹೋಗುವಳು. ಮದಮಾನಿ ಮತ್ತು ಸಕಳೆ ಉಸಿರ್ಗರೆಯುವರು. ]

**ಸಕಳೆ**— ಅಯ್ಯೋ ! ದೊಡ್ಡ ಕುತ್ತಿನಿಂದ ಪಾರಾದಂತಾಯಿತು. ರಾಣಿಯವರು ನನಗೆ ಏನನ್ನುವರೋ ಎಂದು ಗಾಬರಿಗೊಂಡಿದ್ದೆ.

**ಮದಮಾನಿ**— ನಿನ್ನದೆಲ್ಲಾ ಸರಿಯಾಯಿತು. ಆದರೆ ಒಡತಿಯ ಸುಖ !! ಒಂದು ವೇಳೆ ಅಲ್ಲಮ ಪ್ರತಿನಿತ್ಯ ಬೆಳಿಗ್ಗೆ ಬರುವಂತೆ ಇಲ್ಲಿಗೆ ಬಂದರೆ ಏನು ಹೇಳಬೇಕು ?

**ಸಕಳೆ**— ಮಾಯಾದೇವಿಯನ್ನು ಬಿಟ್ಟುಹೋದ ಅವನು ಇನ್ನೇನು ಇಲ್ಲಿಗೆ ಬರುವನು ? ಅವನಿಗೆ ಎಂಟೆದೆಯೇ ಇಲ್ಲಿಗೆ ಬರುವುದು ?

**ಮದಮಾನಿ**— ಹಾಗೆನ್ನಬೇಡ ಸಕಳೆ. ಪ್ರತಿನಿತ್ಯದ ಕಾರ್ಯದಲ್ಲಿ ಈವರೆಗೂ ಅಲ್ಲಮ ತಪ್ಪಿಸಿಲ್ಲ. ಅವನನ್ನು ಜುಲುಮೆಯಿಂದ ಕರೆದುಕೊಂಡು ಬಂದವಳು ನಾನು ! ನಾನೇ ತಪ್ಪಿತಸ್ಥೆ !

**ಸಕಳೆ**— ನೀನು ಹೇಳಿದಂತೆ ಇಕೋ ಅಲ್ಲಮ ಇಲ್ಲಿಗೇ ಬರುತ್ತಿದ್ದಾನೆ. ಮದಮಾನಿ, ನೀನು ತಪ್ಪಿತಸ್ಥೆಯೆಂದು ಅನಿಸುತ್ತಿದ್ದರೆ, ನೀನು ಸುಮ್ಮನಿರು. ನಾನೇ ಅವನ ಕೂಡ ಮಾತನಾಡಿ ಎಲ್ಲವನ್ನು ಹೇಳುವೆ.

**ಅಲ್ಲಮ** — (ಮನಸ್ಸಿನಲ್ಲಿ ಯಾವ ವಿಕಾರವನ್ನೂ ತೋರಿಸದೆ ಪ್ರವೇಶಿಸಿ ) ಮಾಯೆ ಎಲ್ಲಿದ್ದಾಳೆ ? ನೃತ್ಯಕ್ಕಾಗಿ ಇನ್ನೂ ಸಿದ್ಧವಾಗಿಲ್ಲವೇ ?

**ಸಕಳೆ**— ಬೇಗನೆ ಸಿದ್ಧವಾಗುವಳು. ಆದರೆ ಇನ್ನು ಮುಂದೆ ಅವಳು ಮಧುಕೇಶ್ವರ ದೇವಾಲಯದಲ್ಲಿಯೇ ನೃತ್ಯ ಕಲಿಯುವಳು.

**ಅಲ್ಲಮ**— ಅದೇಕೆ ?

**ಸಕಳಿ**— ಅರಮನೆಗೆ ನೀನು ಬರುವುದರಿಂದ ಜನ ಏನೇನೋ ಮಾತನಾಡು ತ್ತಿದೆ. ವಿಚಾರಿಸಿ ನೋಡಿದರೆ ನೀರಿನಲ್ಲಿ ಮುಳುಗಿದ ಸುಣ್ಣಕಲ್ಲಂತೆ ನಿನ್ನ ಬೇಟದಲ್ಲಿ ಮಾಯಾದೇವಿ ಕುದಿಯುತ್ತಿದ್ದಾರೆಂಬುವುದೂ ನಿಜ. ಏನೇ ಇರಲಿ, ನೀನು ದೂರವಿರುವುದೇ ವಿಹಿತ.

**ಅಲ್ಲಮ**— ಮಾಯೆಯನ್ನು ಅಗಲಿದ ಮೇಲೆ, ನಿಜವಾದ ಕಾಯವುಂಟೇ ? ಅಕಟಾ ! ಸಾಯದಂತಿರೆ ಸತ್ತೆ ನಾನು.

**ಸಕಳಿ**— ಅಲ್ಲಮ, ನಿನಗೆ ಮಧುಕೇಶ್ವರ ದೇವಾಲಯದ ಹೊರಗೆ ಬೀಡು ಮಾಡಿಕೊಡುತ್ತದೆ. ಅಲ್ಲಿಯೇ ಇರು. ದೇವಾಲಯದಲ್ಲಿಯೇ ಮಾಯಾ ದೇವಿಯವರ ನೃತ್ಯಕ್ಕೆ ಸಹಾಯಕನಾಗು.

**ಅಲ್ಲಮ**— ಆಗಲಿ ! ( ಹೋಗುವನು. )

**ಸಕಳಿ**— ಮದಮಾನಿ, ನಡೆ ಇನ್ನು ಹೋಗೋಣ. ನಮ್ಮ ಕುತ್ತುಗಳೆಲ್ಲ ಮುಗಿದಂತಾದವು.

**ಮದಮಾನಿ**—ನಡೆ, ಮಾಯಾದೇವಿಯರನ್ನು ಆಮೇಲೆಯೆ ಭೆಟ್ಟಿಯಾಗೋಣ.

[ ಮದಮಾನಿ ಮತ್ತು ಸಕಳೆ ಇಬ್ಬರೂ ಹೋಗುವರು. ತರುವಾಯ ಮುಖ ತೊಳೆದುಕೊಂಡ, ಹೆರಳು ಬಾಚಿಕೊಂಡ ಮಾಯಾದೇವಿ ಒಳಗಿನಿಂದ ಪ್ರವೇಶಿಸುವಳು. ಅವಳಲ್ಲಿ ಚಿಂತೆ ಇನ್ನೂ ಮನೆಮಾಡಿದೆ. ]

**ಮಾಯೆ**— ( ದೇವರಿಗೆ ಕೈಮುಗಿದು ) ಮಧುಕೇಶ್ವರ, ನೀನೇ ನನಗೆ ಬೆಳಕು ತೋರಿಸು.

**ವಿಮಳೆ**—( ಪ್ರವೇಶಿಸಿ ) ಮಾಯಾ, ನಿನಗೆ ಬೆಳಕಿನ ಹಾದಿಯನ್ನು ತೋರಿಸ ಲೆಂದೇ ನಾನು ಬಂದಿರುವೆ.

**ಮಾಯೆ**— ಇದೇನು ಆಶ್ಚರ್ಯ ! ಯಾರು ನೀನು ? ಹೇಗೆ ಬಂದೆ ? ಎಲ್ಲಿಂದ ಬಂದೆ ?

**ವಿಮಳೆ**— ನಿನ್ನ ಎಲ್ಲ ಪ್ರಶ್ನೆಗಳಿಗೂ ಉತ್ತರ ಹೇಳುವೆ ಗೆಳತಿ. ನನ್ನ ಹೆಸರು ವಿಮಳೆ. ರಜತಾದ್ರಿಯಿಂದ ಬಂದಿದ್ದೇನೆ.

**ಮಾಯೆ**— ರಜತಾದ್ರಿಯಿಂದ ! ಕುಳಿತುಕೋ ವಿಮಳೆ ಏನು ವಿಶೇಷವಾದ ಸುದ್ದಿ ?

**ವಿಮಳೆ**— ( ಕುಳಿತುಕೊಂಡು ) ನಿನ್ನ ಕಾರಣಕಥನವನ್ನು ಹೇಳಲು ಗಿರಿಜೆ ನನ್ನನ್ನು ಇಲ್ಲಿಗೆ ಕಳಿಸಿದ್ದಾಳೆ. ನೀನು ಕಾರಣಕನ್ಯೆ.

**ಮಾಯೆ**— ನಾನು ಕಾರಣಕನ್ಯೆ ಎಂದು ಗಿರಿಜೆ ಹೇಳಿದ್ದಾಳೆಯೆ ? ನನಗೆ ಯಾವ ಸ್ಮರಣೆಯೂ ಇಲ್ಲವಲ್ಲ ?

**ವಿಮಳೆ**—ಮಾನವರಿಗೆ ಪೂರ್ವಸ್ಥಿತಿಯ ಸ್ಮರಣೆ ಹೇಗೆ ಇರಬೇಕು? ಅಂತಿಯೇ ನಿನ್ನ ಕಥೆಯನ್ನು ಕೇಳು. ಒಂದು ಸಲ ಗಿರಿಜೆ ಪರಮೇಶ್ವರನಿಗೆ ಕೇಳಿದಳು : “ ನಿನ್ನ ಮಹಿಮೆಯನ್ನು ಬೋಧಿಸುವ ಗುರು ಇಳೆಯಲ್ಲಿ ಯಾರು ? ” ಎಂದು. ಅದಕ್ಕೆ ಪರಮೇಶ್ವರ ‘ ಅಲ್ಲಮ ’ ಎಂದು ಹೇಳಿದನು.

**ಮಾಯೆ**— ಅಲ್ಲಮನೇ ! ಹಾಗಾದರೆ ಅಲ್ಲಮ ಪರದೇಶಿಯಲ್ಲ. ಬಡವನಲ್ಲ. ತೇಜಸ್ಸಿನ ಮೂರ್ತಿ ! ಈಶ್ವರ !!

**ವಿಮಳೆ**— ಅಹುದು ಮಾಯೆ. ಆ ಅಲ್ಲಮನೇ ಮದ್ದಲಿಗನಾಗಿ ಈ ದೇಶಕ್ಕೆ ಬಂದಿದ್ದಾನೆ.

**ಮಾಯೆ**— ಮೊದಲ ದಿನ ಅಲ್ಲಮ ಮದ್ದಳೆಯನ್ನು ಬಾರಿಸಿದಾಗ, ನನಗೆ ಶಿವನ ಡಮರುಗವನ್ನೇ ಕೇಳಿದಂತಾಯಿತು. ಹಾಗಾದರೆ ನನ್ನದು ನಿಜವಾದ ಅನುಭವ.

**ವಿಮಳೆ**— ಸತ್ಯವಾದ ಅನುಭವ. ಸತ್ಯವೇ ದೇವರು ಎಂಬುದನ್ನು ನೀನು ಅರಿಯೆಯಾ ?........ಆದರೆ ಇನ್ನೊಂದು ಸಂಗತಿಯೂ ಆ ದಿನ ನಡೆಯಿತು. ಪಾರ್ವತಿಯು ಅಲ್ಲಮನನ್ನು ವಶಪಡಿಸಿಕೊಂಡು ನಿಜವಾದ ತತ್ವ ತಿಳಿಯುವದಾಗಿ ಶಪಥ ಮಾಡಿದ್ದಾಳೆ. ಅದಕ್ಕಾಗಿಯೇ ಅವಳು ಈ ಭೂಲೋಕದಲ್ಲಿ ಕಳುಹಿದ್ದಾಳೆ.

**ಮಾಯೆ**— ಯಾರನ್ನು ಕಳುಹಿದ್ದಾಳೆ ?

**ವಿಮಳೆ**— ಬನವಾಸೆಯಲ್ಲಿರುವ ಮಾಯೆಯನ್ನು !

**ಮಾಯೆ**— ( ಆತ್ಯಾಶ್ಚರ್ಯದಿಂದ ) ಹಾಂ ! ನನ್ನನ್ನು ?? ಈ ಪೂರ್ವದ ಕಥನಕಾರಣದಿಂದ ತಿಳಿವು ತಿಣ್ಣನೆ ತಿಟ್ಟವಿಟ್ಟಂತೆ ಆಗುತ್ತಿದೆ.

**ವಿಮಳೆ**— ಮಾಯೆ, ನಿನ್ನ ಮೋಹದ ಬಲೆಯಲ್ಲಿ ಅಲ್ಲಮ ಬೀಳಬೇಕು.

**ಮಾಯೆ**— ವಿಮಳೆ, ನೀನು ಹೇಳುವ ಅಲ್ಲಮಪ್ರಭು, ಈ ಮದ್ದಳೆಯ ಅಲ್ಲಮ ಬೇರೆಬೇರೆಯೆಂದು ನನಗೆ ಆನಿಸುತ್ತದೆ. ನೀನು ಹೇಳುವುದು ಸುಳ್ಳು ಎಂದೆನಿಸುತ್ತಿದೆ.

**ವಿಮಳೆ**— ನಿನ್ನ ಸಾತ್ವಿಕದ ಬುದ್ಧಿಯಿಂದ ಅವನನ್ನು ನೋಡು. ಬೇಕಾದರೆ ಮಧುಕೇಶ್ವರ ದೇವಾಲಯಕ್ಕೆ ನಡೆ. ಹೇಗಾದೂ ಅಲ್ಲಮನೂ ಅಲ್ಲಿಗೆ ಬರುವನು. ಅವನು ದೇವನು ಅಹುದೋ, ಅಲ್ಲವೋ ಎಂಬುದನ್ನು ನಾನು ತೋರಿಸುತ್ತೇನೆ. ಆವನು ದೇವನೆಂಬುದು ಗೊತ್ತಾದಮೇಲಾದರೂ ನೀನು ಗಿರಿಜೆಯ ಶಪಥ ಫಲದಾಯಕವಾಗುವಂತೆ ನೋಡಿಕೊಳ್ಳಬೇಕು.

**ಮಾಯೆ**— ಮಾಯೆ ಅಷ್ಟು ಮಾಟವನ್ನು ಮಾಡಬಲ್ಲಳು ವಿಮಳೆ. ಲೋಕವನ್ನೆ ಮರುಳು ಮಾಡುವ ಮಾಯೆಯಾಗುವೆ ನಾನು.

## ೪

[ ಮಧುಕೇಶ್ವರ ಮಂದಿರದ ಮಹಾದ್ವಾರದ ದಾರಿ. ಒಳಗೆ ನವರಂಗದಲ್ಲಿ ಮಾಯೆ ನರ್ತಿಸುತ್ತಿದ್ದಾಳೆ. ಅಲ್ಲಮ ಸುಂದರವಾಗಿ ಮೃದಂಗವನ್ನು ಬಾರಿಸುತ್ತಿದ್ದಾನೆ. ಸಕಳೆ ಮತ್ತು ಮದಮಾನಿ ಬಾಗಿಲಲ್ಲಿ ನಿಂತಿದ್ದಾರೆ. ಜನ ಸಂಗೀತವನ್ನು ಕೇಳಲು, ನೃತ್ಯವನ್ನು ನೋಡಲು ಇಟ್ಟಣಿಸಿ ನೆರೆದಿದೆ. ]

**ಮದಮಾನಿ**— ಸಕಳೆ, ಆ ವಿಮಳೆಯನ್ನು ನೋಡು. ಮಾಯಾದೇವಿಯರಿಗೆ ತನ್ನ ಕಣ್ಣಿಂದಲೇ ಏನೇನೋ ಸೂಚಿಸುತ್ತಿದ್ದಾಳೆ.

**ಸಕಳೆ**— ಕಣ್ಣುಗಳೇ ಮಾತನಾಡುತ್ತಿವೆ. ಅಂಗನೆಯರಿಗೆ ಕಂಗಳಲ್ಲಿಯೆ ಸರ್ವಪ್ರಪಂಚ ಸಹಜವೆನ್ನುವಂತೆ ತೋರುತ್ತಿದೆ.

**ಮದಮಾನಿ**— ನಿನಗೆ ಗೊತ್ತಿದೆಯೇನು ಸಕಳೆ? ಏನೋ ಒಂದು ರಹಸ್ಯ ವನ್ನು ಹೇಳಲು ಆ ವಿಮಳೆ ಇಲ್ಲಿಗೆ ಬಂದಿದ್ದಾಳಂತೆ.

**ಸಕಳೆ**— ಯಾವ ರಹಸ್ಯ?

**ಮದಮಾನಿ**—ನಾನೂ ನೀನೂ ಹೂಡಿಸಿದ ಆಟದ್ದು. ಅಲ್ಲಮನನ್ನು ಮೋಹಿ ಸುವ ಬಗೆಯನ್ನು ವಿಮಳೆ ಹೇಳಿಕೊಡುತ್ತಿದ್ದಾಳೆ.

**ಸಕಳೆ**— ಹಾಗಾದರೆ ನಮ್ಮಿಚ್ಛೆ ನೆರವೇರಿದಂತಾಗುತ್ತದೆ.

**ಮದಮಾನಿ**— ಹೂಂ! ಬರಿ ಅಷ್ಟೇ ಅಲ್ಲ ಆ ಕಾರ್ಯ ಆಗಲೇಬೇಕಾಗಿದೆ. ಕೈಲಾಸದಲ್ಲಿ ಪಾರ್ವತಿ ಪರಮೇಶ್ವರನ ಕೂಡ ಪೈಜೆ ಕಟ್ಟಿದ್ದಾಳಂತೆ.

**ಸಕಳೆ**— ಓಹೋ!! ನಮಗೆ ಬೆಂಬಲಿಗಳಾಗಿ ವಿಮಳೆ ಬಂದಿದ್ದಾಳೆ ಹಾಗಾ ದರೆ!

**ಮದಮಾನಿ**— ಅಹುದು. ನೋಡು, ಅಲ್ಲಿ ಮಾಯಾದೇವಿಯರನ್ನು. ಈ ನಟನಾಟಕನ ಸಿಕ್ಕಿಸುವ ಬಗೆಯ ಮಾಟವನ್ನು ನೋಡು. ಆಹಾ! ಅದೆಂಥ ಲಾಸ್ಯ! ಅದೆಂಥ ನೋಟ!! ಮಾಯಾದೇವಿ ಹೀಗೆ ನರ್ತಿ ಸುವುದನ್ನು ನಾನೆಂದೂ ನೋಡಿಲ್ಲ.

**ಸಕಳೆ**— ಈ ನಾಟ್ಯ ಅಲ್ಲಮನ ಚಿತ್ತವನ್ನು ನಾಟಿಬಿಡುತ್ತದೆ.

**ಮದಮಾನಿ**— ಓಹೋ! ಇದೇನು??........ಅಲ್ಲಮನು ಮದ್ದಳೆಯನ್ನು ಬಿಸುಟಿ ಎದ್ದನು.

[ ಜನರ ಗಜಬಜ. ಅಲ್ಲಮ, ಸಕಳೆ ಮತ್ತು ಮದಮಾನಿಯವರ ಎದುರಿಗೇ ಮಿಂಚಿನಂತೆ ಹಾಯ್ದು ಮಾಯವಾಗುವನು. ]

**ಸಕಳೆ**— ಇದೇನು ಹೊಸದು? ಅಲ್ಲಮ ಮದ್ದಳೆಯನ್ನು ಬಿಸುಟಿ ಹೋಗಿ ಬಿಟ್ಟನಲ್ಲ?

**ಮಾಯೆ**— ( ತನ್ನ ನೃತ್ಯದ ವೇಷದಲ್ಲಿಯೇ ಓಡಿಬಂದು )........ಎಲ್ಲಿ ಅವರು? ಮದಮಾನಿ, ಸಕಳೆ, ಆ ನನ್ನ ದೇವರು ಎಲ್ಲಿ ಹೋದರು? (ರೋದಿಸುತ್ತ) ನನ್ನ ಹರಣವೇ ಹಾರಿಹೋಯಿತು ಅವರ ಕೂಡ.

**ಮದಮಾನಿ**— ಮಾಯಾದೇವಿ, ಬೆಳಕಿನಂತೆ ನಮ್ಮೆದುರು ಮಿಂಚಿ ಮಾಯವಾದನು. ಸಿಕ್ಕಲಿಲ್ಲ!

**ಮಾಯೆ**— ಸಿಕ್ಕಲಿಲ್ಲ! ಸಿಕ್ಕಲಿಲ್ಲ! ನನಗೆ ಕೊನೆಗೂ ಬೆಳಕು ಸಿಕ್ಕಲಿಲ್ಲ!

**ವಿಮಳೆ**— ( ಪ್ರವೇಶಿಸಿ ಮಾಯೆಯ ನ್ಯೆದಡವಿ ) ಏಳು ಮಾಯೆ; ಏಳು. ನಡೆ ಹೋಗೋಣ.

**ಮದಮಾನಿ**
**ಸಕಳೆ** } — ಏಳಿ, ದೇವಿಯವರೆ.

**ಸಕಳೆ**— ಅರಮನೆಯಲ್ಲಿ ವಿಶ್ರಾಂತಿ ತೆಗೆದುಕೊಳ್ಳಿ. ಆ ಮದ್ದಲಿಗನ ಆಶೆಯನ್ನು ಬಿಟ್ಟುಬಿಡಿ.

**ಮಾಯೆ**— ಅವರ ಆಶೆಯನ್ನು ಬಿಟ್ಟೆರಾ? ಹಾಗಾದರೆ ನನ್ನ ಆಶೆಯನ್ನೂ ಬಿಟ್ಟುಬಿಡಿರಿ. ನನಗೆ ಇನ್ನೆಲ್ಲಿ ಅರಮನೆ? ಇನ್ನೆಲ್ಲಿ ವಿಶ್ರಾಂತಿ? ನನ್ನ ದೇವರನ್ನು ಕರೆದುತಾರೆದ ಹೊರತು, ನಾನು ಅರಮನೆಗೆ ಮರಳುವದಿಲ್ಲ.

**ವಿಮಳೆ**— ಅಹುದು ಮಾಯೆ. ಅಲ್ಲಮನು ಎಲ್ಲಿ ಹೋಗುವನು? ಎಲ್ಲ ಲೋಕಗಳಲ್ಲಿಯೂ ತಿರುಗಿ ಅವನನ್ನು ಹುಡುಕಿ ನೋಡೋಣ. ಅವನ ಸುಳಿವನ್ನು ನಾನು ಹೇಳಿಕೊಡುವೆ.

**ಮಾಯೆ**— ಗಿರಿಜೆಯ ಪ್ರೈಜೆ ಫಲಿಸುವುದೇ?

**ವಿಮಳೆ**— ಮದಮಾನಿ, ಸಕಳೆ, ನಮ್ಮ ಕೂಡ ಬನ್ನಿ. ಕಾಡೆನ್ನದೆ ಬೀಡೆನ್ನದೆ ಓಡಾಡಿ ಅಲ್ಲಮನನ್ನು ಶೋಧಿಸೋಣ.

## ದೃಶ್ಯ ೫

[ ಅರಣ್ಯದಲ್ಲಿ ತಪೋವನದಲ್ಲಿ ಅಲ್ಲಮನಿದ್ದಾನೆ. ಸಕಳೆ ಮತ್ತು ಮದಮಾನಿಯರು ಅವನನ್ನು ನೋಡಿ ಮುತ್ತುತ್ತಾರೆ. ವಿಮಳೆ ಮತ್ತು ಮಾಯೆ ಅವರೂ ಅಲ್ಲಿಗೆ ಆಗಮಿಸುತ್ತಾರೆ. ]

**ಮದಮಾನಿ**— ಬನ್ನಿ, ಬನ್ನಿ; ಅಲ್ಲಮ ಇಲ್ಲಿ ಇದ್ದಾನೆ.

**ಸಕಳೆ**— ಆಹಾ! ತನಗೇ ಏನೂ ತಿಳಿಯದವನಂತೆ ಇಲ್ಲಿ ಬಂದು ಕುಳಿತಿದ್ದಾನೆ.

**ಮದಮಾನಿ**— ಅಯ್ಯಾ! ಲೇಸುಮಾಡಿದೆ! ಇಷ್ಟು ದಿನ ಮಾಯಾದೇವಿಯರನ್ನು ಒಲಿಸಿ, ಕೊನೆಗೆ ಹೀಗೆ ಘಾಸಿ ಮಾಡುವುದು ಯೋಗ್ಯವೆ?

**ಅಲ್ಲಮ**— ನನ್ನನ್ನು ಬಯುಸಲು ಮೊದಲು ಯಾರು ಹೇಳಿದರು? ಯಾರು ನನ್ನನ್ನು ಮೊದಲು ಕರೆಸಲು ಹೇಳಿದರು?........ಕೊನೆಗೆ........ನನ್ನ ಬಗ್ಗೆ ಉದಾಸೀನ ಮಾಡಲು ಯಾರು ಹೇಳಿದರು?

**ಮದಮಾನಿ**— ನಾವೇ ಮಾಡಿದ್ದೇವೆ. ನಾವೇ ನಿನ್ನನ್ನು ಈಗ ತಿರುಗಿ ಅರಮನೆಗೆ ಕರೆದುಕೊಂಡು ಹೋಗಲು ಬಂದಿದ್ದೇವೆ.

**ಸಕಳೆ**— ಕಲ್ಲುಮುಳ್ಳು ತುಳಿದು, ಬಿರುಗಾಳಿಗಳಿಗೆ ಸಿಕ್ಕು ಬಳಲಿ ಬೆಂಡಾಗಿ ಬಂದಿದ್ದೇವೆ. ನಡೆ ತಿರುಗಿ ಅರಮನೆಗೆ. ನಮ್ಮ ಮಾಯಾದೇವಿಯರಿಗೆ ನೀನು ಹೀಗೆ ಮಾಡಬೇಕೆ?

**ಅಲ್ಲಮ**— ಒಮ್ಮೆ ಹೀಗೆ, ಒಮ್ಮೆ ಹಾಗೆ ಮಾಡುವ ಈ ಸಂಚಲ ಕಾರಣಿಕತನ ನಾರಿಯರಿಗೆ ಸಹಜ!...........ಸುಮ್ಮನೇ ನನ್ನನ್ನು ದೂರಿದರೆ ನಾನೇನು ಮಾಡಲಿ?

**ಮಾಯೆ**— ( ಕೋಪದಿಂದ ) ದೇವ, ನೀವೇ ಗತಿಯೆಂದು ನಾನು ಬಂದೆ. ಆದರೆ ಧೂರ್ತ ! ನೀವು ಇಂಥ ಕುಮಂತ್ರರು, ಕುತ್ಸಿತರು, ಚಪಳಿಗರು ಎಂಬುದನ್ನು ನಾನು ಮೊದಲು ತಿಳಿಯಲಿಲ್ಲ.

**ಅಲ್ಲಮ**— ನೀನು ಹೇಳುವ ಈ ದುರ್ಗುಣಗಳು ಯಾರಲ್ಲಿ ಇವೆ ? ನಿನ್ನಲ್ಲಿಯೋ ? ನನ್ನಲ್ಲಿಯೋ ? ಹರಿಹರಬ್ರಹ್ಮಾದಿಗಳನ್ನೆ ಕೇಳಿ ನೋಡು.

**ಮಾಯೆ**— ಓ ! ಅವರೆಲ್ಲರೂ ನನ್ನ ಅಧೀನದಲ್ಲಿಯೆ ಇದ್ದಾರೆ ಅವರನ್ನೇನು ಕೇಳುವುದು ?

**ಅಲ್ಲಮ**— ಹುಚ್ಚೀ ! ಅವರೆಲ್ಲ ನಿನ್ನ ಅಧೀನದಲ್ಲಿ ಇರುವರೆಂದು ಹೇಳುವೆ. ಹಾಗಾದರೆ ನೀನು ಯಾರ ಅಧೀನದಲ್ಲಿ ಇರುವಿ ? ಸುಮ್ಮನೆ ಗರ್ವದ ನುಡಿಗಳನ್ನು ಆಡಬೇಡ.

**ಮಾಯೆ**— ದೇವ, ಈ ಧೂರ್ತ ವಿಚಾರಗಳನ್ನು ಸಾಕುಮಾಡಿ. ಬೇಗನೆ ಕೃಪೆ ತೋರಿಸಿ. ಬೆಂದ ಹುಣ್ಣನ್ನು ಕಂಬಿಯಲ್ಲಿ ಕೀಸಬೇಡಿ.

**ಅಲ್ಲಮ**— ಸುಮ್ಮನೇ ಏತಕ್ಕೆ ಬಯಸುವೆ ?

**ವಿಮಳೆ**— ಶರಣಜನ ರಕ್ಷಾಮಣಿಯೆ, ನಿಮ್ಮ ಕರುಣವೇ ಅವಳ ಹರಣವು. ನೀವು ಅವಳನ್ನು ಒಪ್ಪಿಕೊಳ್ಳಬೇಕೆಂದು ಕೇಳಿಕೊಳ್ಳುವೆ.

**ಅಲ್ಲಮ**— ಅಯ್ಯೋ, ನಿಮಗೆ ಬುದ್ಧಿಯನ್ನು ಹೇಳುವುದರಿಂದ ಏನೂ ಉಪಯೋಗವಿಲ್ಲ. ನೀರಿಗೆ ಹೆಪ್ಪುಹಾಕಿ, ಅದನ್ನು ತಿಂದು ಯಾರಾದರೂ ಬದುಕುವರೆ ? ಕಾಳುಮತಿಗಳಿಗೆ ಏನು ಮಾತನಾಡಬೇಕು ?

**ವಿಮಳೆ**— ಏನೇ ಇರಲಿ, ನೀವು ಮಾಯೆಯನ್ನು ರಕ್ಷಿಸಬೇಕು. ಈ ಹೆಣ್ಣು ಕೀಳು ಕಬ್ಬಿಣ ಎಂದು ಒದ್ದರೂ ಅಷ್ಟೆ. ತೋಳಲ್ಲಿ ಕರುಣೆಯಿಂದ ಅಪ್ಪಿದರೂ ಅಷ್ಟೆ. ಕಬ್ಬಿಣದಂತೆ ಇರುವ ಹೆಣ್ಣಿಗೆ, ನೀವು ಪರುಷದಂತೆ ಇರುವಿರಿ.

**ಅಲ್ಲಮ**— ಮಾಯಾಂಗನೆಯ ಮನಸ್ಸು ಸಂಚಲವಾಗಿದೆ. ನಾನು ಪರುಷದಂತಾದರೂ ಉಪಯೋಗವಿಲ್ಲ. ಒಂದು ಬೀಜವನ್ನು ಬಿತ್ತಿ, ಮತ್ತೊಂದು ಫಲವನ್ನು ಬಯಸಿದರೆ ಏನು ಬರುತ್ತದೆ ? ಮಾಯಾಂಗನೆ

ಯಲ್ಲಿ ತಾಮಸದ ಮದವಿದೆ. ಸಂಚಲ ಭಕ್ತಿಯಿದೆ. ಆದರಿಂದ ಸತ್ಫಲಗಳು ಹೇಗೆ ಸಿಗಬೇಕು ?

**ವಿಮಳೆ**— ಘನಮಹಿಮ, ನಿನ್ನ ಮನಸ್ಸು ಬಂದಂತೆ ಮಾಡು. ನಿನ್ನ ಕರುಣವಿದ್ದಂತೆ ಇವಳನ್ನು ಕಾದು ರಕ್ಷಿಸು. ಇದಕ್ಕೂ ಹೆಚ್ಚಿಗೆ ನಾವು ಏನು ಹೇಳಬೇಕು ?

**ಅಲ್ಲಮ**— ವಿಮಳೆ, ನೀನು ಹೇಳಬೇಕಾದದ್ದನ್ನೇ ಹೇಳಿದೆ. ( ಮಾಯೆಯ ಕಡೆಗೆ ನೋಡಿ ) ಮಾಯೆ, ಸೂರ್ಯನು ಎತ್ತ, ಕತ್ತಲೆ ಎತ್ತ? ಪರಮ ತತ್ವವೆತ್ತ, ಕಾಮವೆತ್ತ ? ಬಂದ ದಾರಿಗೆ ಸುಂಕವಿಲ್ಲ. ಮಾಯೆ, ನಿನ್ನ ದಾರಿ ಹಿಡಿದು, ನಿನ್ನ ಮನೆಗೆ ಹೋಗು.

**ಮಾಯೆ**— ದೇವ, ಕನಸಿನಲ್ಲಿ ಮನಸಿನಲ್ಲಿ ನೀವೆ ಸುಳಿದಿರುವಿರಿ. ನಿಮ್ಮನ್ನು ನಾನು ಹೇಗೆ ಬಿಟ್ಟುಹೋಗಬೇಕು ? ನಿಮ್ಮ ಪಾದದಲ್ಲಿಯೇ ನಾನ-ಸಾಯುವೆ. ನಾನು ತಿರುಗಿ ಹೋಗಲಾರೆ. ನನ್ನ ಅಂತರಾಳದ ನೋವನ್ನು ನೀವು ತಿಳಿಯಿರಾ ?

**ಅಲ್ಲಮ**— ಕನಸಿನಲ್ಲಿ ಚೇಳು ಕಚ್ಚಿದರೆ ನೋವಾಯಿತೆಂದು ನರಳಬೇಕೆ ? ಮಾಯೆ, ನೀನು ಹುಚ್ಚಿ. ನಿನಗೆ ಶಿವಾನುಭಾವದ ತತ್ವಜ್ಞಾನವಿಲ್ಲ.

**ಮಾಯೆ**—ಇರಲಿ ದೇವ, ನಾನು ಹಾಗೆಯೇ ಇರಲಿ. ನಿಮ್ಮ ಬಂಧನದಲ್ಲಿಯೇ ನಾನು ಇರುವೆ. ನಿಮ್ಮ ಪ್ರೇಮಬಂಧನದಲ್ಲಿಯೇ ನನಗೆ ಸಾವು ಬರಲಿ. ಇಕೋ, ನನ್ನನ್ನು ಸ್ವೀಕರಿಸಿ, ದೇವ.

[ ಮಾಯೆ ಅಲ್ಲಮನ ಸಮೀಪ ಹೋಗಹತ್ತುವಳು. ಅಲ್ಲಮ ಅವಳನ್ನು ದೂರ ಸರಿಸುವನು. ]

**ಅಲ್ಲಮ**— ನಡೆಯಾಚೆ ಹುಚ್ಚೀ. ನೀನು ಬಯಲನ್ನೆ ಅಪ್ಪಿದಂತೆ. ಈ ಬೆಳಕು ನಿನ್ನ ಕೈಗೆ ಸಿಗಲಾರದು.

[ ಅಲ್ಲಮ ದೂರ ದೂರ ಸರಿಯುತ್ತ ಬೆಳಕಿನಂತೆ ಮಾಯವಾಗುವನು. ]

**ಮಾಯೆ**— ಅಯ್ಯೋ ! ನನ್ನ ಪ್ರಭು ಎಲ್ಲಿ ಮಾಯವಾದರು ? ನನ್ನ ಬಾಳು ಹಾಳಾಯಿತು. ನಾನಿನ್ನು ಜೀವಿಸಲಾರೆ. ನಾಥ ! ಪ್ರಭೂ !

ಮದಮಾನಿ
ಸಕಳೆ } — ಏಳಿ ಮಾಯಾದೇವಿಯರೆ, ಹೀಗೆ ದುಃಖಪಡಬೇಡಿ.

[ ಅಷ್ಟರಲ್ಲಿ ಮಮಕಾರ ಮತ್ತು ಮೋಹಿನಿದೇವಿಯರು ಮಾಯೆಯನ್ನು ಹುಡುಕಿಕೊಂಡು ಅಲ್ಲಿಗೆ ಬರುವರು. ]

**ಮಮಕಾರ**— ಮಾಯೆ, ಹೀಗೆ ದೇಸಿಗನ ಸಹವಾಸ ಮಾಡಬೇಕೆ? ಒಬ್ಬ ಮುದ್ದಳೆಯುವನ ಬೆನ್ನುಹತ್ತಿ ಹೋಗಬೇಕೆ? ಛೀ ಹುಚ್ಚಿ. ರಾಜ್ಯದಲ್ಲೆಲ್ಲ ನಗೆಯಾಡುವಂತೆ ಮಾಡಿದಿ.

**ವಿಮಳೆ**— ಪ್ರಭುಗಳೆ, ದಯವಿಟ್ಟು ಹುಣ್ಣಿಗೆ ಬರೆಕೊಟ್ಟಂತೆ ಅವಳಿಗೆ ಮಾತನಾಡಬೇಡಿ. ಅವಳು ಅಯೋಗ್ಯವಾದುದನ್ನು ಏನೂ ಮಾಡಿಲ್ಲ.

**ಮೋಹಿನಿ**— ಬೇಡ, ಬೇಡ ಎಂದು ನಾನು ಎಷ್ಟು ಹೇಳಿದೆ, ಕೇಳಲಿಲ್ಲ. ಕೊನೆಗೆ ಈ ರೀತಿ ಕೇಡು ಬರುವದೆಂದು ನಾನು ಮೊದಲೆ ಎಚ್ಚರಿಸಿದೆ.

**ಮಮಕಾರ**— ಮಾಯೆ, ಕೊನೆಗೆ ಈ ಕಾಡಿನಲ್ಲಿ ಬೀಳಬೇಕೆ? ನಮಗೂ ಹುಚ್ಚುಹಿಡಿಸಿದಿ. ಇದೆಂಥ ವ್ಯಾಮೋಹ?

**ವಿಮಳೆ**— ಪ್ರಭುಗಳೇ, ನೀವೇನು ಕೋಪಿಸಿಕೊಳ್ಳಬೇಡಿ. ಚಿಂತೆ ಮಾಡಬೇಡಿ. ಗಿರಿಜೆಯ ನೇಮದಂತೆ ಅವಳು ಇಲ್ಲಿಗೆ ಬಂದಿದ್ದಾಳೆ.

**ಮೋಹಿನಿ**— ಏನು, ಇವಳು ಕಾರಣ ಕನ್ಯೆಯೆ?

**ಮಮಕಾರ**— ನಮ್ಮ ಕುಲಗುರು ಅಹಂಕಾರಾಚಾರ್ಯರು ಹೇಳಿದ ಮಾತು ನನಗೆ ನೆನಪಿಗೆ ಬರುತ್ತಿದೆ. ಪರಶಿವನೇ ಮಾಯೆಗೆ ಪತಿ ಎಂದು ಅವರು ಹೇಳಿದ್ದರು.

**ಮಾಯೆ**— ಕಾರಣವ ಕೈಕೊಂಡು ನಿಮ್ಮ ಕುಮಾರಿಯಾಗಿರುವೆ. ನಮ್ಮ ಕಾರ್ಯ ಕೈಗೂಡಲಿಲ್ಲ.

**ವಿಮಳೆ**— ಪರಶಿವನ ರೂಪವೇ ಅಲ್ಲಮ. ದ್ಯುಮಣಿ ಅಲ್ಲಮ ಮಾಯೆಯ ತಮಕ್ಕೆ ಸಿಕ್ಕದಂತಾಗಿದ್ದಾನೆ. ಅವಳ ಉದ್ದೇಶ ಸಫಲವಾಗುವಂತೆ ಮಾಡುವುದು ನನ್ನ ಕಾರ್ಯ. ನಾನು ಅವಳನ್ನು ಉಮೆಯ ಹತ್ತಿರ ಕೈಲಾಸಕ್ಕೆ ಕರೆದುಕೊಂಡು ಹೋಗುವೆ.

**ಮಾಯೆ**— ( ಆನಂದದಿಂದ ) ವಿಮಳೆ, ನಿನ್ನ ಕೂಡ ನಾನು ಬರುವೆ. ನನಗೆ ದಾರಿ ತೋರು. ತಂದೆ ತಾಯಿಗಳೇ, ಆಶೀರ್ವದಿಸಿ. ನಾನು ರಜತ ಗಿರಿಗೆ ಹೋಗಿ ಅಮರವಾದ ಬೆಳಕನ್ನು ಕಾಣುವೆ.

[ ಮಮಕಾರ ಮತ್ತು ಮೋಹಿನಿ ಚಿಂತೆಯಲ್ಲಿದ್ದು, ಏನೋ ಮಾತನಾಡಬೇಕು ಅನ್ನುವಷ್ಟರಲ್ಲಿಯೆ ಮಾಯೆ ಮತ್ತು ವಿಮಳೆ ದೂರ ದೂರ ಹೋದರು. ಸಖಿಯರು, ಮಮಕಾರ ಮತ್ತು ಮೋಹಿನಿಯರು ಮಾಯಾ ! ಮಾಯಾ !! ಎಂದು ಕೂಗಿಕೊಳ್ಳುವರು. ]

**ಮೋಹಿನಿ**— ಹೋದಳು ! ಹೋದಳು !!

[ ಮಾಯೆ ಮತ್ತು ವಿಮಳೆಯರು ಹೋದ ಕಡೆಗೇ ನೋಡುತ್ತ ವಾತ್ಸಲ್ಯ ಹೃದಯದಿಂದ ಮೋಹಿನಿ ನಿಲ್ಲುವಳು. ]

**ಮಮಕಾರ**— ಪರಶಿವನ ಲೀಲೆ ಹೀಗೆಯೆ ಜಗತ್ತಿನಲ್ಲಿ ಕಾಣುತ್ತದೆ.

[ ಮದ್ದಳೆಯ ಧ್ವನಿ ದೂರದಿಂದ ಕೇಳಬರುತ್ತದೆ. ಮಾಯೆಯ ನೃತ್ಯದ ಹೆಜ್ಜೆಗಳೂ ಸಮರಸವಾಗಿ ಕೇಳಿಬರುವವು. ಎಲ್ಲರೂ ಆಶಾದಾಯಕ ಆನಂದದಿಂದ ನೋಡುತ್ತಿರುವಾಗ ಪರದೆ ಬೀಳುವುದು. ]

---